# ಜಗಜ್ಯೋತಿ ಬಸವೇಶ್ವರ



ಲೇಖಕರು :

ಎಸ್. ಕೆ. ಹೊಳೆಯಣ್ಣವರ ಎಂ.ಎ. ಎಂ.ಎಡ್.,

ಮುಂಡರಗಿ



ಪ್ರಕಾಶಕರು :

ಎಮ್. ಎಸ್. ಶಾಬಾದಿಮಠ ಬುಕ್ ಡಿಪೊ,

ಸ್ಟೇಶನ್ ರೋಡ್, ಗದಗ.

ಪ್ರಕಾಶಕರು :

ಎಮ್. ಎಸ್. ಶಾಬಾದಿಮಠ

ಬುಕ್ ಡಿಪೋ, ಗದಗ.



ಲೇಖಕರು.

ಎಸ್. ಕೆ. ಹೊಳೆಯಣ್ಣವರ ಎಂ.ಎ. ಬಿ.ಎಡ್.,

ಮುಂಡರಗಿ

ಮುದ್ರಕರು :

ಮೆ। ಶಾಬಾದಿಮಠ

ಪ್ರಿಂಟಿಂಗ್ ಪ್ರೆಸ್, ಗದಗ.

## ಅರಿಕೆ

ವಿಶ್ವಮಾನವ ಮಹಾತ್ಮಾ ಬಸವೇಶ್ವರರ ಪ್ರತಿಭೆ ಕುರಿತು ಧಾರ್ಮಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಅನೇಕ ಗ್ರಂಥಗಳು ಬಿಡುಗಡೆಯಾಗಿದ್ದು ಸಂತೋಷಕರ ಸಂಗತಿಯಾಗಿದೆ.

ಜಗಜ್ಯೋತಿ ಬಸವಣ್ಣನವರ ಕುರಿತು ಪಠ್ಯಕ್ರಮದ ವಿವಿಧ ಹಂತಗಳಲ್ಲಿ ಅಳವಡಿಸಿದ್ದಾದರೂ ವಿದ್ಯಾರ್ಥಿಗಳಿಗೆ ಮನ ಮುಟ್ಟುವ ರೀತಿಯಲ್ಲಿ ತಿಳಿಸಲು ಸಾಧ್ಯವಾಗಿಲ್ಲ ಎಂದು ನನ್ನ ಭಾವನೆಯಾಗಿದೆ.

ಇತ್ತೀಚಿಗೆ ದೊಡ್ಡ ಗ್ರಂಥಗಳು ಬಂದಿವೆಯಾದರೂ ಕೆಲಸದ ಬಾಹುಳ್ಯ, ಸಮಯದ ಅಭಾವದ ಮೂಲಕ ಯಾರೂ ಅವುಗಳನ್ನು ತಿಳಿಯಲು ಇಷ್ಟ ಪಡುತ್ತಿಲ್ಲ. ಪುಸ್ತಕದ ಗಾತ್ರ, ಭಾರವನ್ನು ಕಂಡು ಮನಸ್ಸಿಗೂ ಭಾರ ಮಾಡಿಕೊಳ್ಳುವದುಂಟು ಕಾರಣ ಸುಲಭ ಭಾಷೆಯಲ್ಲಿ ಬರೆದ ಗಹನ ವಿಚಾರಗಳನ್ನು ತಿಳಿಯಾದ ಶೈಲಿಯಲ್ಲಿ ಮೂಡಿಸಬಲ್ಲ ಚಿಕ್ಕ ಗ್ರಂಥಗಳ ಅಗತ್ಯವಿದೆ. ಕಾರಣ ಈ ಪುಸ್ತಕವನ್ನು ಬರೆಯಲು ಮಾನ್ಯ ಪ್ರಕಾಶ ಶಾಬಾದಿಮಠರೇ ಪ್ರೇರಕರಾಗಿದ್ದಾರೆ. ಈ ಸಂದರ್ಭದಲ್ಲಿ ಅವರನ್ನು ನೆನಪಿಸಲಾರದೇ ಇರಲಾರೆ.

ಆಡು ಮುಟ್ಟದ ಗಿಡಗಳಿಲ್ಲ, ಶ್ರೀ ಬಸವೇಶ್ವರರು ಎದುರಿಸದ ಸಮಸ್ಯೆಗಳಿಲ್ಲ. ಸಾಮಾಜಿಕ ಸುಧಾರಣೆ, ಜಾತೀಯತೆ, ಮಾನವರಲ್ಲಿ ತಾರತಮ್ಯ, ಸಂಪ್ರದಾಯಿಕ ಅನಿಷ್ಟ ಪದ್ಧತಿಗಳು ಮೇಲು ಕೀಳು ಎಂಬ ಭಾವನೆ ಮೊದಲಾದವುಗಳನ್ನು ಹೋಗಲಾಡಿಸಬೇಕೆಂಬುದೇ ಅವರ ಗುರಿಯಾಗಿತ್ತು. ಅವರು ಈ ನೆಲದ ಮೇಲೆ ನಡೆದಾಡಿ ಸುಮಾರು 800 ವರ್ಷಗಳು ಆಗಿ ಹೋದವು. ಅವರು ಕಲ್ಪಿಸಿಕೊಂಡು ಕಟ್ಟಬಯಸಿದ ಸಮಾಜ ಇಂದಿಗೂ ಸಂಪೂರ್ಣವಾಗಿ ಅಸ್ತಿತ್ವಕ್ಕೆ ಬಂದಿಲ್ಲವೆಂಬುದನ್ನು ಗಮನಿಸಿದಾಗ ಅಷ್ಟು ಹಿಂದೆಯೇ ಅವರು ಕಂಡ

ಮಾಡಲು ನಡೆಸಿದ ಹೋರಾಟ ಎಷ್ಟು
ಕನಸು ಮತ್ತು ನನಸು ಮಾಡಲು ನಡೆಸಿದ ಹೋರಾಟ ಎಷ್ಟು
ದೊಡ್ಡದೆಂಬುದು ಅರಿವಾಗದಿರದು. ಅವರ ವಿಚಾರಗಳೆಲ್ಲ
ಕ್ರಾಂತಿಯ ಸ್ವರೂಪದವುಗಳು. ಆದರೆ ಅವರದು ಅಹಿಂಸಾ ಕ್ರಾಂತಿ,
ಹೃದಯ ಪರಿವರ್ತನೆ ಅವರ ಸಾಧನೆ. ಅವರ ವಿಚಾರ ವಿಚಾರಗಳನ್ನು
ಒಂದೆಡೆಗೆ ಸಂಗ್ರಹಿಸಿ ಸಂದರ್ಭಕ್ಕನುಸಾರವಾಗಿ ವಚನಗಳನ್ನು
ಉದಾಹರಿಸಿ ವಿಷಯವನ್ನು ಸರಳವಾಗಿ ಸ್ಪಷ್ಟವಾಗಿ ತಿಳಿಯುವಂತೆ
ಪ್ರಯತ್ನಿಸಿದ್ದೇನೆ. ಸುತ್ತು ಬಳಸಿ, ದೊಡ್ಡ ದೊಡ್ಡವಾದ ಗಹನ ಶಬ್ದಗಳ
ಬಳಕೆ ಮಾಡಿ ವಿವರಿಸುವ ಗೋಜಿಗೆ ಹೋಗದೆ ಮಾನವತಾವಾದಿ
ಬಸವಣ್ಣನವರ ಜೀವನ, ಅವರ ಬಾಲ್ಯದ ದಿನಗಳು ಅವರ ಬದುಕನ್ನು
ಚಿತ್ರಿಸುವ ಒಂದು ಕಿರು ಪ್ರಯತ್ನ ಅಷ್ಟೇ.

"ಬಸವಣ್ಣ ಇಂದಿನ ಯಾವದೇ ಪ್ರಗತಿಪರ ಚಿಂತಕ ನಿಂತಲೂ
ಹೆಚ್ಚು ಪ್ರಗತಿಪರ ಚಿಂತಕನಾಗಿದ್ದರು. ಬಸವಣ್ಣನ ಬದುಕ
ಪಾರದರ್ಶಕ" ನಡೆಯೊಂದು ಪರಿ ನುಡಿಯೊಂದು ಪರಿಯಾಗಿರ
ಲಿಲ್ಲ. ನುಡಿದಂತೆ ನಡೆ ಅದೇ ಜನ್ಮ ಕಡೆ" ಎಂದು ತಿಳಿಸಿದರು.

ಬಸವಣ್ಣನವರು ದೀನ ದಲಿತರ ಬಂಧುವಾಗಿ, ಸಮಾಜ
ಸುಧಾರಕರಾಗಿ, ನಿಮ್ನ ವರ್ಗದವರ ಹಿತೈಷಿಯಾಗಿ, ಸರ್ವ
ಸಮತಾವಾದಿಯಾಗಿ, ಮನುಕುಲ ಪ್ರೇಮಿಯಾಗಿ, ಧರ್ಮಬೋಧಕ
ರಾಗಿ, ವೀರಶೈವ ಮತೋದ್ಧಾರಕರಾಗಿ, ಕ್ರಾಂತಿ ಪುರುಷರಾಗಿ, ಬಾಳಿ
ಬೆಳಗುವದರೊಂದಿಗೆ ವಿಶ್ವಮಾನವತಾವಾದಿಯಾಗಿ ಹೋದರು.
ಅವರು ಕಿರು ಪರಿಚಯ ಈ ಹೊತ್ತಿಗೆ ಹೊಂದಿದೆ. ಈ ಗ್ರಂಥವನ್ನು
ಓದುಗರು ಆಸ್ಥೆಯಿಂದ ಸ್ವಾಗತಿಸುವರೆಂದು ಆಶಿಸುತ್ತೇನೆ.

ಮುಂಡರಗಿ - ಪ್ರೊ. ಎಸ್. ಕೆ. ಹೊಳೆಯಣ್ಣವರ

## 1. ಬಸವೇಶ್ವರ : -

ಭೀಮಾ ಕೃಷ್ಣಾ, ಮಲಪ್ರಭಾ ಹಾಗೂ ಡೋಣಿ ಎಂಬ ಐದು ನದಿಗಳನ್ನೊಳಗೊಂಡ ಬಿಜಾಪೂರ ಜಿಲ್ಲೆ ಅನೇಕ ಕಾರಣಗಳಿಂದಾಗಿ ಐತಿಹಾಸಿಕ ಮಹತ್ವ ಪಡೆದ ಸ್ಥಳವಾಗಿದೆ. ಇತ್ತೀಚೆಗೆ ಬಾಗಲಕೋಟೆ ಜಿಲ್ಲೆಯಾಯಿತಾದರೂ ಈ ಹಿಂದೆ ಈ ಜಿಲ್ಲೆಯು ಬಿಜಾಪೂರ ಜಿಲ್ಲಾ ವ್ಯಾಪ್ತಿಗೆ ಒಳಪಟ್ಟಿತ್ತು. ಕಲೆ, ಸಾಹಿತ್ಯ, ಸಂಗೀತ, ಧಾರ್ಮಿಕ ಹಿನ್ನಲೆಯನ್ನು ಹೊಂದಿದ ನಾಡು ಇದಾಗಿತ್ತು.

ಈಗ ಬಸವನ ಬಾಗೇವಾಡಿ ಎಂದು ಹೆಸರು ಪಡೆದ ಬಾಗೇವಾಡಿ 11-12 ನೆಯ ಶತಮಾನದ ಒಂದು ಪ್ರಸಿದ್ಧ ಅಗ್ರಹಾರ. ಬ್ರಾಹ್ಮಣರಿಗೆ ರಾಜರು ದಾನವಾಗಿ ಕೊಟ್ಟ ಗ್ರಾಮಗಳನ್ನು ಅಗ್ರಹಾರವೆಂದು ಕರೆಯುತ್ತಿದ್ದರು.

ಬಾಗೇವಾಡಿಯಲ್ಲಿ 500 ಬ್ರಾಹ್ಮಣ ಕುಟುಂಬಗಳು ವಾಸವಾಗಿದ್ದವು. ಬಹುಪಾಲು ಬ್ರಾಹ್ಮಣರಿದ್ದರೂ ಉಳಿದವರ ಸಂಖ್ಯೆ ಕಡಿಮೆಯಿರಲಿಲ್ಲ. ಬಾಗೇವಾಡಿಯನ್ನು "ಮಹಾ ಅಗ್ರಹಾರವೆಂದು ಕರೆಯುತ್ತಿದ್ದರು. ಬ್ರಾಹ್ಮಣರು ಸರ್ವ ವಿದ್ವತ್ತಿನಿಂದಾಗಿ ಸರ್ವತ್ರ ಪೂಜ್ಯರಾಗಿದ್ದರು. ಆಗಿನ ಕಾಲಕ್ಕೆ ವಿದ್ಯೆ ಪಡೆಯುವದು ಹಾಗೂ ನೀಡುವದು ಬ್ರಾಹ್ಮಣರ ಸ್ವತ್ತಾಗಿತ್ತು.

ಬಾಗೇವಾಡಿಯಲ್ಲಿರುವವರೆಲ್ಲ ಶೈವ ಬ್ರಾಹ್ಮಣರು ಅಲ್ಲಿಯ ಶಿವದೇವಾಲಯವೇ ಎಲ್ಲ ಚಟುವಟಿಕೆಗಳ ಕೇಂದ್ರವಾಗಿತ್ತು. ಸಮಾಜದಲ್ಲಿ ಬ್ರಾಹ್ಮಣರಿಗೆ ವಿಶೇಷ ಗೌರವ ಅಧಿಕಾರಗಳುಳ್ಳ ವರ್ಗಕ್ಕೆ ಸೇರಿದವರಾಗಿದ್ದರು. ಪ್ರಾಚೀನ ಕರ್ನಾಟಕದ ಇತಿಹಾಸವನ್ನು ಗಮನಿಸಿದಾಗ ಸಾಮಾನ್ಯವಾಗಿ ದೇವಸ್ಥಾನಗಳು ವಿದ್ಯಾ

ಕೇಂದ್ರಗಳಾಗಿದ್ದು ಕಂಡು ಬರುತ್ತದೆ. ಧಾರ್ಮಿಕ ಶಿಕ್ಷಣವಾದ ವೇದ
ಪುರಾಣ ಆಗಮಗಳ ಅಧ್ಯಯನವಲ್ಲದೇ ಲೌಕಿಕ ಶಿಕ್ಷಣವೆನಿಸಿ
ಕೊಂಡ ಸಂಗೀತ, ನೃತ್ಯ, ಶಿಲ್ಪ ಸಾಹಿತ್ಯದ ಕಲಿಕೆಗೂ ದೇವಾಲಯ
ಗಳಲ್ಲಿ ಆಸ್ಪದವಿತ್ತು.

ಹೀಗೆ ಮಹಾ ಅಗ್ರಹಾರವೆಂದು ಗೌರವ ಹೊಂದಿದ
'ಬಾಗೇವಾಡಿ'ಯ ಅಗ್ರೇಸರ ಅಂದರೆ ಆ ಪಟ್ಟಣ ಮುಖ್ಯಸ್ಥ
ಮುಂಡಗೆಯ ಮಾದಿರಾಜ, 'ಮುಂಡಗಿ' ಎನ್ನುವದು ಮಾದಿರಾಜನ
ಮನೆತನದ ಹೆಸರು ಮಾದಿರಾಜನ ಮೊದಲ ಹೆಸರು 'ಮಹಾದೇವ'
ಆತನು ಆ ವಲಯದ ಒಡೆಯವಾಗಿದ್ದರಿಂದ ಅವನಿಗೆ 'ಅರಸ' ಎಂಬ
ಅಭಿದಾನವನ್ನು ಸೇರಿಸಿ ರೂಢಿಯಲ್ಲಿ ಮಾದರಸ ಎಂದು
ಕರೆಯುತ್ತಿದ್ದರು.

ಮಾದರಸ ಎತ್ತರ ನಿಲುವಿನ, ಹೊಳೆಯುವ ಕಣ್ಣುಗಳ, ದವಳ
ಕಾಂತಿಯ ಮೈ ಬಣ್ಣದ ಶುಚಿರ್ಭೂತ ವ್ಯಕ್ತಿತ್ವವನ್ನು ಹೊಂದಿದ್ದನು.
ಅವನ ಹೆಂಡತಿ ಮಾದಾಂಬೆ, ಮಾದಲಂಬಿಕೆ. ಇವರು ಸಂಖ್ಯಾಯನ
ಗೋತ್ರಕ್ಕೆ ಸೇರಿದ್ದ ''ಕಮ್ಮೆ'' ಕುಟುಂಬದ ಶೈವ ಬ್ರಾಹ್ಮಣರಾಗಿದ್ದರು.
ಬಹಳ ಕಾಲದ ಹಿಂದೆಯೇ ಆಂಧ್ರ ಪ್ರದೇಶದ ನೆಲ್ಲೂರು ಮತ್ತು
ಗುಂಟೂರು ಪ್ರದೇಶಗಳಿಂದ ಆ ಕುಟುಂಬ ಕರ್ನಾಟಕಕ್ಕೆ ಒಲಸೆ
ಬಂದಿತೆಂದು ''ಕಮ್ಮೆ'' ಎಂಬ ಪದವೇ ಸೂಚಿಸುತ್ತದೆ.

ಮಾದರಸ ಶಿವಭಕ್ತನು. ಮಾದಲಾಂಬಿಕೆಯೂ, ಪತಿಯಂತೆ
ಸುಶೀಲೆಯೂ ಶಿವಭಕ್ತೆಯೂ ಆಗಿದ್ದಳು. ಈ ದಂಪತಿಗಳೀರ್ವರು
ಶಿವಭಕ್ತ ಶಿವಭಕ್ತೆಯಾಗಿದ್ದರೂ ಪುತ್ರ ಸಂತಾನದ ಕೊರಗು
ಕಾಡುತ್ತಿತ್ತು. ಈ ದಂಪತಿಗಳಿಗೆ ದೀರ್ಘ ಕಾಲದ ವರೆಗೆ ಪುತ್ರ
ಸಂತಾನವೇ ಆಗಲಿಲ್ಲ. ಮಾದಲಾಂಬಿಕೆ ಜ್ಯೋತಿಷಿಗಳಿಗೆ ಮೊರೆ



ಹೋದಳು. ಸಮಾಲೋಚನೆ ನಡೆಸಿದಳು ದಂಪತಿಗಳು ವೃಷಭ
ವ್ರತವನ್ನು ಆಚರಿಸಬೇಕೆಂದು ಅವರು ಸೂಚಿಸಿದರು. ಮಾದಲಾಂಬಿಕೆ
ವ್ರತವನ್ನು ಕೈಕೊಂಡು ಯುಕ್ತ ರೀತಿಯಲ್ಲಿ ತುಂಬ ಭಕ್ತಿಯಿಂದ ಅದನ್ನು
ಸಾಂಗಗೊಳಿಸಿದಳು. ಪುತ್ರ ಸಂತಾನವನ್ನು ಕರುಣಿಸುವಂತೆ
ನಂದಿಯನ್ನು ಬೇಡಿಕೊಂಡ ಅವಳು ಗಂಡು ಮಗು ಹುಟ್ಟಿದರೆ ಅದಕ್ಕೆ
ಅವನ ಹೆಸರನ್ನೇ ಇಡುವದಾಗಿ ಹೇಳಿ ಪ್ರಾರ್ಥಿಸಿಕೊಂಡಳು.
ನಂದೀಶ್ವರನ ಪ್ರಸಾದ ಬಲದಿಂದ ಆಕೆಯು ಒಬ್ಬ ಗಂಡು ಮಗುವನ್ನು
ಹಡೆದಳು. ಚಿಂತೆ ನಿವಾರಣೆಯಾಯಿತು. ಇದು ನಡೆದದ್ದು ಸುಮಾರು
ಕ್ರಿ.ಶ. 1132 ರಲ್ಲಿ.

## 2. ಬಸವಣ್ಣನವರ ಜನನ ಮತ್ತು ಬಾಲ್ಯದ ದಿನಗಳು :-

ಇಂಗಳೇಶ್ವರ ಬಾಗೇವಾಡಿ ಬ್ರಾಹ್ಮಣ ದಂಪತಿಗಳಾದ ಮಾದರಸ
ಮತ್ತು ಮಾದಲಂಬಿಕೆಯರು ಬಸವಣ್ಣನ ತಂದೆ ತಾಯಿಗಳು ಸಾಧ್ವಿ
ಮಾದಲಂಬಿಕೆಯ ಸಾತ್ವಿಕ ಬದುಕೇ ಸಾಕಾರಗೊಂಡಂತೆ ಕೊನೆಗೂ
ಕ್ರಿ.ಶ. 1105 ರಲ್ಲಿ ಅವಳ ಉದರದಿಂದ ಪುಣ್ಯ ಶಿಶುವೊಂದು
ಉದಯಿಸಿತು. ಎಂಥ ಮುದ್ದಾದ ಶಿಶು. ಅದೇ ಆಗ ಚಿಪ್ಪನೊಡೆದು
ಹೊರ ಬಂದ ಮುತ್ತಿನಂತೆ ನಿರಭ್ರ, ನಿಲಾಕಾಶದಲ್ಲಿ ಪ್ರಶಾಂತವಾಗಿ
ಬೆಳೆಯುವ ಚಂದ್ರನಂತೆ, ಸರೋವರದಲ್ಲಿ ಅರಳಿದ ಕಮಲದಂತೆ
ಆ ಮುದ್ದು ಮಗು.

ಅನೇಕ ಕವಿಗಳು ಬಸವಣ್ಣನವರ ಮಾತಾಪಿತರ ಬಗ್ಗೆ ತಮಗೆ
ದೊರೆತ ಮಾಹಿತಿ ಪ್ರಕಾರ ತಿಳಿಸಿದ್ದಾರೆ. ಆದರೆ ರೈತರು ಮಾತ್ರ
ಹಿರಿಯರ ನಾಲಿಗೆಯಿಂದ ಕೇಳಿ ನೆನಪಿಟ್ಟ ಅವರ ಹೆಸರನ್ನು ಹಂತಿಯ
ಹಾಡಿನಲ್ಲಿ ಹೀಗಿ ತಿಳಿಸಿದ್ದಾರೆ.

''ಹಡೆದವ್ವ ಮಾದವ್ವ, ಹಡೆದಪ್ಪ ಮಾದರಸ,
ಪಡೆದವ್ವ ಅಕ್ಕ ನಾಗವ್ವ, ಬಸವನ
ಬಿಡದೆ ಸಲುಹಿದನು ವರಸಂಗ''

ಹಡೆದ ತಾಯಿಯ ಹೆಸರು ಮಾದವ್ವ, ತಂದೆಯ ಹೆಸರು ಮಾದರಸ, ತಾಯಿಯ ಪ್ರೀತಿಯನ್ನು ತೋರಿದ ಒಡಹುಟ್ಟಿದ ಸಹೋದರಿ ಅಕ್ಕ ನಾಗವ್ವ ಬಸವನನ್ನು ಸದಾ ಕಾಲ ಸಲುಹಿದ ಅವ್ಯಕ್ತ ಶಕ್ತಿಯ ಕರುಣಾನಿಧಿ ದೇವರು ಸಂಗಮನಾಥ.

ಮಾದರಸ ಮತ್ತು ಮಾದಲಾಂಬಿಕೆಯಿಂದ ಹುಟ್ಟಿದ ಬಾಗೇವಾಡಿಯ ಭಾಗ್ಯ ರವಿ ಕಣ್ಣು ತೆರೆಯಲಿಲ್ಲ. ಬಾಯಿ ತೆರೆದು ಅರಳಲಿಲ್ಲ. ಸದ್ದಿಲ್ಲದೇ ಸುಮ್ಮನೇ ಮಲಗಿತ್ತು. ಈ ಸೋಜಿಗದಿಂದ ತಂದೆ ತಾಯಿಂದಿರು ಚಿಂತಿಸತೊಡಗಿದರು. ಕೂಡಲೇ ಸಂಗಮದಲ್ಲಿಯ ಆಶ್ರಮದ ಗುರುಗಳಾದ ಜಾತವೇದ ಮುನಿಗಳು ಅಷ್ಟರಲ್ಲಿ ಬಾಗೇವಾಡಿಗೆ ಆಗಮಿಸಿದ್ದರು. ಈ ಸುದ್ದಿ ತಿಳಿದು, ಮಾದರಸನ ಮನೆಗೆ ಬಂದರು. ಅವರು ಮಗುವಿಗೆ ಭಸ್ಮ ಹಚ್ಚಿ ಕಿವಿಯಲ್ಲಿ ''ಓಂ ನಮಃ ಶಿವಾಯ'' ಮಂತ್ರವನ್ನು ಉಸುರಿಸಿದರು. ಶಿವಲಿಂಗ ಧಾರಣ ಮಾಡಿ, ಆ ಮಗು ಕಣ್ಣು ತೆರೆದು ನಕ್ಕು ನಲಿಯುವಂತೆ ಮಾಡಿದರು. ಆ ಬಾಲಕನಿಗೆ ಬಸವರಸ ಎಂದು ಹೆಸರಿಡಲು ಸೂಚಿಸಿದರು. ಮಾದಲಾಂಬಿಕೆಯು ತನ್ನ ಮೊಲೆಯ ಹಾಲನ್ನು ಉಣಿಸಲು ಯತ್ನಿಸಿದಳು ಆದರೆ ಆ ಮಗು ಹಾಲನ್ನು ಕುಡಿಯಲಿಲ್ಲ, ಆಗ ಜಾತವೇದ ಮುನಿಗಳು ಮಾದಲಾಂಬಿಕೆಗೆ ಶಿವಲಿಂಗ ಧಾರಣ ಮಾಡಿದ ಮೇಲೆ ಆ ಕೂಸು ಹಾಲು ಕುಡಿಯಿತಂತೆ ಶಿವಕಾರುಣ್ಯದಿಂದ ಹುಟ್ಟಿದ ಕೂಸಿಗೆ ಶಿವ ಪ್ರೇರಣೆಯಾಗಿರಬೇಕು. ಇದೊಂದು ದೈವಿ ಲೀಲಾ ಪ್ರಸಂಗ. ಅಕ್ಕ ನಾಗಮ್ಮನ ಕೋರಿಕೆಯಂತೆ ಆಕೆಗೂ ಮುನಿಗಳು



ಲಿಂಗಧಾರಣೆ ಮಾಡಿದರು. ಬಳಿಕ ಕೂಡಲ ಸಂಗಮಕ್ಕೆ ತೆರಳಿದರು. ಇತ್ತ ಮಗು ಕಣ್ಣು ತೆರೆಯಿತು. ಬಾಯಿ ತೆರೆಯಿತು. ತಂದೆ ತಾಯಂದಿರು ಅಪಾರ ಆನಂದದಲ್ಲಿ ಲೋಲಾಡಿದರು.

ಮಗು ಹುಟ್ಟಿದ 12 ನೆಯ ದಿನ ಊರ ಜನರಿಗೆ ಔತಣ ನೀಡಿ ಆತನಿಗೆ ಬಸವರಸ ಎಂದು ಹೆಸರಿಟ್ಟರು. ಎಲ್ಲರ ಮುದ್ದಿನ ಕಣ್ಮಣಿಯಾಗಿ ಬೆಳೆದಂತೆ ಸಕಲರ ಮನಸ್ಸನ್ನು ಸೆಳೆದನು. 5 ವರ್ಷದವನಾದ ಮೇಲೆ ಓದು ಬರಹ ಪ್ರಾರಂಭಿಸಿದನು. ಪ್ರತಿನಿತ್ಯ ವಿದ್ವಾಂಸರ ಗೋಷ್ಠಿ. ವೇದ ಮಂತ್ರಗಳ ಪಠಣದ ಪ್ರಭಾವದಿಂದ ಅಸಂಖ್ಯಾತ ಮಂತ್ರಗಳು ಬಸವನಿಗೆ ಕಂಠೋದ್ಗತವಾದವು. ಬುದ್ಧಿವಂತ ಬಾಲಕ ಎಂದು ಹೆಸರುವಾಸಿಯಾದನು. ತಾಯಿಯೊಡನೆ ಗುಡಿಗೆ ಹೋಗಿ ಶಿವಭಜನೆ ಶಿವಧ್ಯಾನದಲ್ಲಿ ಕಾಲಕಳೆಯುತ್ತಿದ್ದನು.

ಬಸವ ಬಾಲಕನಾದ, ಬಸವ 8 ನೆಯ ವರ್ಷ ಆತನ ತಂದೆ ತಾಯಿಗಳು ಸಡಗರದಿಂದ ಮಗನ ಮುಂಜವಿ ಮಾಡುವ ಸಿದ್ಧತೆಯಲ್ಲಿ ತೊಡಗಿದರು. ಮುಂಜಿವೆಯಿಂದ ಬ್ರಾಹ್ಮಣತ್ವ ಬರುತ್ತದೆ ಎಂದು ತಂದೆ ತಿಳಿಸಿದರು. ''ನನಗೆ ಲಿಂಗಧಾರಣೆಯಾಗಿದೆ ಮತ್ತೇಕೆ ಈ ಜನಿವಾರ ಹಾಗಾದರೆ ಅಕ್ಕನಿಗೂ ತಾಯಿಗೂ ಈ ಜನಿವಾರ ತೊಡಿಸು ಎಂದು ಬಾಲಕ ಪ್ರಶ್ನಿಸಿದನು. ಅದಕ್ಕೆ ತಂದೆ ನಮ್ಮ ಸಂಪ್ರದಾಯದಂತೆ ಹೆಣ್ಣು ಮಕ್ಕಳಿಗೆ ಜನಿವಾರ ತೊಡಿಸುವ ಪದ್ಧತಿಯಿಲ್ಲ ಅವರು ಶೂದ್ರರು ಎಂದು ಉತ್ತರಿಸಿದರು. ತಾಯಿ ಶೂದ್ರ ತಂದೆ ಬ್ರಾಹ್ಮಣ ಈ ಜನಿವಾರದ ಕುರುಹು ಇದೆಂಥಾ ವಿಪರ್ಯಾಸ ಎಂದು ಕೊಂಡನು. ''ಬೆಳೆಯುವ ಸಸಿಯನ್ನು ಮೊಳಕೆಯಲ್ಲಿ ನೋಡು'' ಈ ಮಾತು ಬಸವನ ಕ್ರಾಂತಿಯ ಮೊದಲ ಹೆಜ್ಜೆಯಾಯಿತು.

ಬಸವನ ತಂದೆ ತಾಯಿಗಳು ಬಸವನನ್ನು ಸುಖಕರ ಜೀವಿಯನ್ನಾಗಿ ಮಾಡುವ ಆಶೆ ಹೊಂದಿದ್ದರು. ಅಗ್ರಹಾರದ ನಾಯಕನ ಮಗನಾಗಿ ಮಕ್ಕಳಲ್ಲಿ ಬಸವನಿಗೆ ವಿಶೇಷವಾದ ಸ್ಥಾನವಿತ್ತು. ಆದರೆ "ತಾನೊಂದು ಬಗೆದರೆ ದೈವವೊಂದು ಬಗೆಯಿತು ಎನ್ನುವಂತೆ" ಅವನು ಲೋಕವನ್ನು ಇನ್ನೊಂದು ದೃಷ್ಟಿಯಲ್ಲಿ ಕಾಣುವಂತೆ ಮಾಡಿತು. ವೈದಿಕ ಧರ್ಮದ ಬಗ್ಗೆ ಜಿಗುಪ್ಸೆ ಉಂಟಾಗ ತೊಡಗಿತು. ಇದರಿಂದಾಗಿ ಬಸವ ಮನೆ ಬಿಟ್ಟು ಕೂಡಲ ಸಂಗಮಕ್ಕೆ ಹೊರಟನು.

*"ಹುಟ್ಟಿ ಬಂದನು ಬಸವ ಕಟ್ಟುದಕೆ ಕಲ್ಯಾಣ*
*ಬಿಟ್ಟು ಬಾಗೋಡಿ ನಾಗಮ್ಮನೊಡಗೂಡಿ*
*ಮೆಟ್ಟು ಮಾಡಿದನು ಸಂಗಮಗೆ"*

ಅಕ್ಕ ನಾಗಮ್ಮನೂ ಹಿಂಬಾಲಿಸಿದಳು ಜಾತವೇದ ಮುನಿಗಳು ಕೂಡಲ ಸಂಗಮನಾಥ ದೇವಾಲಯದ ಪಕ್ಕದಲ್ಲಿಯೇ ಒಂದು ಗುರುಕುಲವನ್ನು ಸ್ಥಾಪಿಸಿದ್ದರು. ಅದೊಂದು ಪುಣ್ಯ ಕ್ಷೇತ್ರ. ಬಸವನ ವಿದ್ಯಾಭ್ಯಾಸ ಜಾತವೇದ ಮುನಿಗಳ ಗುರುಕುಲದಲ್ಲಿ ಆರಂಭವಾಯಿತು. ಗುರುಗಳ ಮೆಚ್ಚಿನ ಶಿಷ್ಯನಾಗಿ ಧರ್ಮಶಾಸ್ತ್ರ ತತ್ವಜ್ಞಾನ, ವ್ಯಾಕರಣ ಸಾಹಿತ್ಯ, ಸಂಗೀತ ಮೊದಲಾದ ವಿಷಯಗಳಲ್ಲಿ 16 ವರ್ಷಗಳ ವರೆಗೆ ಅಭ್ಯಾಸ ಮಾಡಿ ಪಾರಂಗತನಾದನು. ಕೂಡಲ ಸಂಗಮನಾಥನ ಪರಮ ಭಕ್ತನಾದನು.

ಜಾತವೇದ ಮುನಿಗಳು ಲಿಂಗಧಾರಿಗಳು ಅವರು ವೀರಶೈವ ಮುನಿಗಳಾಗಿದ್ದರು. ಇವರ ಮಾರ್ಗದರ್ಶನದಲ್ಲಿ ವೇದ, ಪುರಾಣ ಶಾಸ್ತ್ರಗಳನ್ನು ಓದಿದರು.



*"ಓದಿದನು ಬಸವಯ್ಯ ವೇದದೊಳಗಿನ ಹುಸಿಯ*
*ಭೇದ ಭೇದವನೆ ಬಿಚ್ಚಿಟ್ಟ ! ಜನಪದಕೆ*
*ತೇದುಂಡ ಜೀವಿ ಬಸವಣ್ಣ"*

ವೇದದಲ್ಲಿರುವ ಸಂಪ್ರದಾಯದಿಂದ ಬಂದ ಮೂಢಾಚಾರಗಳನ್ನು ಖಂಡಿಸಿ ನೈಜ ಧರ್ಮದೆಡೆಗೆ ತರುವ ಕೆಲಸ ಮಾಡಿದರು.

ಒಮ್ಮೆ ನಾಗಪಂಚಮಿ ಹಬ್ಬ ಬಂದಿತ್ತು, ಆ ಉತ್ಸವದಲ್ಲಿ ನಾಗರ ವಿಗ್ರಹದ ಮೇಲೆ ಸ್ವತಃ ಹಾಲು ತುಪ್ಪವನ್ನು ಎರೆದು ಪೂಜೆ ಮಾಡಿದ ಆದರೆ ನಿಜವಾದ ಸರ್ಪ ಕಂಡಾಗ ಕೊಲ್ಲಲು ತ್ವರೆ ಪಟ್ಟರು. ಅಗ್ನಿ ಪೂಜೆ ಮಾಡಿ ಬೆಂಕಿ ಹೊತ್ತಿಕೊಂಡಾಗ ಮರಳು ನೀರನ್ನು ಸುರಿದ ಆರಿಸಲಾಗುತ್ತಿತ್ತು. ಈ ರೀತಿಯ ಬ್ರಾಹ್ಮಣರ ಇಬ್ಬಗೆಯ ಜೀವನ ಕಂಡು ಬಸವನ ಸಂವೇದನ ಶಕ್ತಿಗೆ ಕಿರುಕಳ ಉಂಟಾಯಿತು. ಹೀಗೆ ಬಸವ ಹೆಚ್ಚು ಹೆಚ್ಚು ವಿಚಾರ ಶೀಲನಾಗಿ ಹಾಗೂ ಆತ್ಮ ಪರೀಕ್ಷೆ ಮಾಡಿಕೊಳ್ಳುವನಾಗಿ ಬೆಳೆದ ಬಾಲ್ಯದಲ್ಲಿ ಪ್ರೌಢ ಮನಸ್ಸನ್ನು ಹೊಂದಿದ್ದ.

ಶಿವಭಕ್ತರ ಕಥೆಗಳನ್ನು ಕೇಳುವದು ಬಸವನಿಗೆ ಇಷ್ಟವಾಗಿತ್ತು. ಬೇಡರ ಕಣ್ಣಪ್ಪ ಹಾಗೂ ಸಿರಿಯಾಳನ ಕಥೆಗಳು ಬಸವನ ಕಿರಿಯ ಮನಸ್ಸಿನ ಮೇಲೆ ತುಂಬಾ ಪ್ರಭಾವ ಬೀರಿದವು. ಇವರು ಸಣ್ಣವರಿರುವಾಗಲೇ ತಂದೆತಾಯಿಗಳನ್ನು ಕಳೆದುಕೊಂಡರು. ಸಂಪೂರ್ಣ ಅನಾಥರಾಗಿದ್ದ ಈ ಸಂದರ್ಭದಲ್ಲಿ ಮುತ್ತಬ್ಬೆಯ ಆಶ್ರಯದಲ್ಲಿ ಕೆಲವು ಕಾಲ ಕಳೆದರು.

### 3. ಬಸವಣ್ಣನವರು ಶಿವಭಕ್ತಿಯ ಕಡೆಗೆ ಒಲವು :-

ಬಸವಣ್ಣನವರಿಗೆ ಸುಮಾರು 16 ವರ್ಷಗಳು ತುಂಬಿದವು. ಈ ಪ್ರಾಯದಲ್ಲಿ ಅವರು ಮಾನಸಿಕ ತುಮುಲಕ್ಕೆ ಒಳಗಾದರು.

ಬ್ರಾಹ್ಮಣರ ಆಚರಣೆಗಳು ಅವರಿಗೆ ಸರಿ ಬರಲಿಲ್ಲ. ಕರ್ಮನಿಷ್ಠ
ಬ್ರಾಹ್ಮಣ ವರ್ಗದವರು ನಡೆಸುತ್ತಿದ್ದ ಧಾರ್ಮಿಕ ವಿಧಿಗಳು ಅರ್ಥ
ಶೂನ್ಯವೆಂಬುದರ ಅರಿವು ಉಂಟಾಯಿತು. ಭಕ್ತಿ ಎಂಬ ಮುಖವಾಡ
ಹೊತ್ತು ಕರ್ಮ ಮಾರ್ಗದಲ್ಲಿ ನಡೆಯುತ್ತಿದ್ದ ಬ್ರಾಹ್ಮಣ ಸಮಾಜದ
ಮೇಲೆ ಆತನಿಗೆ ಸಿಟ್ಟು ಬಂದಿತು. ಕಾರ್ಯ ಕಾರಣ ದೃಷ್ಟಿಯಿಂದ
ಪ್ರತಿಯೊಂದು ಕರ್ಮವನ್ನು ಅಳೆಯತೊಡಗಿದರು.

"ನೀರ ಕಂಡಲ್ಲಿ ಮುಳಗುವರಯ್ಯ,
ಮರವ ಕಂಡಲ್ಲಿ ಸುತ್ತುವರಯ್ಯ,
ಕಲ್ಲನಾಗರ ಕಂಡರೆ ಹಾಲನೆರೆಯುವರಯ್ಯಾ,
ದಿಟ ನಾಗರ ಕಂಡರೆ ಕೊಲ್ಲೆಂಬರಯ್ಯಾ"

ಎಂಬ ಇತ್ಯಾದಿ ಅನುಭವಗಳು ದಿನ ನಿತ್ಯ ಆಗತೊಡಗಿದವು.
ಈ ಸಲುವಾಗಿ ಬಸವ ಆ ಸಮಾಜಕ್ಕೆ ಸವಾಲಾಗಿ ನಿಂತಿದ್ದು ಮುಂದಿನ
ಬೆಳವಣಿಗೆಗೆ ನಾಂದಿಯಾಯಿತು. ಬಾಹ್ಯ ಶುದ್ಧಿಯ ಜೊತೆಗೆ
ಆಂತರಿಕ ಶುದ್ಧಿಯೂ ಇರಬೇಕೆನ್ನುವದು ವಿಚಾರಶೀಲನಾಗಿ ಬೆಳೆದ
ಬಸವನ ಮನಸ್ಸಿನಲ್ಲಿ ನಾಟಿತು.

ಹಿರಿಯರ ಸಹವಾಸದಲ್ಲಿ ಪುರಾಣ ಪುಣ್ಯ ಕಥೆಗಳನ್ನು
ಆಲಿಸುತ್ತಿದ್ದ ಬಸವಣ್ಣನಲ್ಲಿ ಕರ್ಮಮಾರ್ಗಕ್ಕಿಂತ ಶ್ರೇಷ್ಠವಾದದ್ದು ಭಕ್ತಿ
ಮಾರ್ಗ ಎಂಬ ಅರಿವು ಉಂಟಾಯಿತು. ದೇವರ ದೃಷ್ಟಿಯಲ್ಲಿ
ಬಡವ-ಬಲ್ಲಿದ, ಸ್ಪೃಶ್ಯ-ಅಸ್ಪೃಶ್ಯ ಒಂದೇ ಎಂಬ ಭಾವನೆ ಅವನ
ಮನಸ್ಸಿನಲ್ಲಿ ಬೇರೂರಿತು. ತಮಿಳು ನಾಡಿನ ಶಿವಭಕ್ತರ ಕಥೆಗಳನ್ನು
ಆಧರಿಸಿದ ಪ್ರವಚನಗಳು ಆಲಿಸುತ್ತಿದ್ದ ಬಸವಣ್ಣನಿಗೆ ಪರಿವರ್ತನೆ
ಅವಕಾಶವನ್ನುಂಟು ಮಾಡಿತು. "ದೇವನೊಬ್ಬ ನಾಮ ಹಲವು"



ಅವನೇ ಶಿವನು. ಶಿವನ ದೃಷ್ಟಿಯಲ್ಲಿ ಮೇಲು ಕೀಳೆಂಬ ಭಾವನೆಗಳು
ಶಿವನ ಎದುರಿನಲ್ಲಿ ಎಲ್ಲರೂ ಸಮಾನರು ಎಂಬ ಭಾವನೆಗಳು
ಬಸವಣ್ಣನ ಮನಸ್ಸಿನಲ್ಲಿ ಚನ್ನಾಗಿ ಬೇರು ಬಿಟ್ಟವು. ಲಿಂಗಾರ್ಚನೆಯಲ್ಲಿ
ಆತ್ಮದ ಕಲ್ಯಾಣವಿದೆ ಎಂದೆನಿಸತೊಡಗಿತು.

ಆ ವೇಳೆಗಾಗಲೇ ಅವನ ಒಡಹುಟ್ಟಿದ ನಾಗಮ್ಮನಿಗೆ ಕೂಡಲ
ಸಂಗಮದ ಶಿವಸ್ವಾಮಿಯೊಂದಿಗೆ ವಿವಾಹವಾಗಿತ್ತು. ಆಕೆಯೇ ಅಕ್ಕ
ನಾಗಮ್ಮ ಆಕೆಯನ್ನು ನಾಗಲಾಂಬೆಯಂತಲೂ ಕರೆಯುತ್ತಿದ್ದರೂ,
ಇವಳು ಬಸವಣ್ಣನಂತೆ ವಿಚಾರಶೀಲಳಾಗಿದ್ದಳು. ವೈದಿಕ
ಸಂಪ್ರದಾಯವನ್ನು ತೊರೆದು ಬಸವಣ್ಣನ ಅನುಯಾಯಿಯಾಗಿ
ಸಹಚಿಂತಕಳಾಗಿ ಆಶ್ರಯ ಆಸರೆಯಾಗಿ ಕೂಡಲ ಸಂಗಮದಲ್ಲಿ
ನೆಲೆಯಾದರು.

ಅಂದಿನ ಕಪ್ಪಡಿ ಸಂಗಮವೇ ಇಂದು ಕೂಡಲ ಸಂಗಮ
ವಾಗಿದೆ. ಇದೊಂದು ಪವಿತ್ರ ಕ್ಷೇತ್ರವಾಗಿದೆ. ಅಲ್ಲಿಯ ಸಂಗಮೇಶ್ವರ
ದೇವಾಲಯ ಅಲ್ಲಿಯ ಲಿಂಗಮೂರ್ತಿ ಆಗ ಬಸವೇಶ್ವರರ ಕಣ್ಮನ
ಗಳನ್ನು ತುಂಬಿಕೊಂಡವು. ಲಿಂಗಮೂರ್ತಿಯದುರು ನಿಂತು ಭಕ್ತಿ
ಪರವಶರಾಗಿ ಬಸವೇಶ್ವರರು ತಮ್ಮನ್ನು ತಾವೇ ಮರೆತರು ಅವರಿಗೆ
ಬಯಸಿದ ಭಾಗ್ಯ ದೊರತಂತಾಯಿತು. ಆ ಲಿಂಗಮೂರ್ತಿಯಲ್ಲಿ
ಅವರಿಗೆ ಶಿವ ಸ್ವರೂಪವೇ ಕಾಣಿಸಿತು. ಈ ವರೆಗೆ ಅವನು ಅದುಮಿ
ಇಟ್ಟಂಥ ಭಾವನೆಗಳು ಮಾತಾಗಿ ಅಭಿವ್ಯಕ್ತಿ ಪಡೆದವು. ಅವರು
ದೇವರನ್ನು ತಂದೆತಾಯಿ ಎಂದು ಕರೆದರು.

"ತಂದೆ ನೀನು ತಾಯಿ ನೀನು, ಬಂಧು ನೀನು
ಬಳಗ ನೀನು, ಎನಗೆ ಮತ್ತಾರಿಲ್ಲವಯ್ಯಾ"

ನೀನೇ ಸರ್ವಸ್ವ ಎಂದು ಸಂಬೋಧಿಸಿದರು ತನ್ನ ಐಹಿಕ ಸಂಬಂಧಗಳನ್ನು ತ್ಯಜಿಸಿ ಅವುಗಳ ಸ್ಥಾನದಲ್ಲಿ ದೇವರನ್ನು ಪ್ರತಿಷ್ಠಾಪಿಸಲು ಸಿದ್ಧನಾದರು.

ಈ ದೇವಸ್ಥಾನದಲ್ಲಿ ಈಶಾನ್ಯ ಗುರುಗಳು ವಾಸವಾಗಿದ್ದರು. ಅವರು ಲಕುಲೇಶ ಪಾಶುಪತ ಪಂಥಕ್ಕೆ ಸೇರಿದವರು ದೇವಾಲಯದ ಆವರಣದ ಒಳಗೆ ವಾಸಿಸುವ ಒಬ್ಬ ಸನ್ಯಾಸಿ ಅವರು ಬಸವೇಶ್ವರರನ್ನು ಕಂಡಾಗ ಶಿವಭಕ್ತಿಯ ಸಾಕಾರ ಮೂರ್ತಿಯನ್ನೇ ಕಂಡಂತಾಯಿತು. ಬಸವೇಶ್ವರರ ಹೊಳೆಯುವ ಕಣ್ಣು, ತೇಜಸ್ವಿಯಾದ ಮುಖ ಮುದ್ರೆ ಎತ್ತರ ನಿಲುವು, ನೇರ ನಡತೆ, ವಿಶಾಲವಾದ ಹಣೆ ವಿನಯ ತುಂಬಿದ ಮಾತು, ಗುರುವಿನ ಅನುಗ್ರಹಕ್ಕಾಗಿ ಸಂಗಮನಾಥನ ಕೃಪೆಗಾಗಿ ಕಾತರಿಸುತ್ತಿರುವ ಮನೋಭಾವ ಇವೆಲ್ಲವನ್ನು ಕಂಡು ಈಶಾನ್ಯ ಗುರುಗಳು ತಮ್ಮ ಅಂತರಂಗದ ಶಿಷ್ಯನನ್ನಾಗಿ ಸ್ವೀಕರಿಸಿದರು. ಬಸವ ತುಂಬಾ ನೊಂದವನೆಂದು ತಿಳಿಯಲು ಅವರಿಗೆ ಕಷ್ಟವಾಗಲಿಲ್ಲ. "ನೀನೆಲ್ಲಿಯೂ ಹೋಗಬೇಡ, ಯಾವುದರ ಚಿಂತೆ ಮಾಡಬೇಡ, ಪೂಜೆಗೆ ತಿಳಿನೀರು ಹಾಗೂ ಹೊಸ ಹೂಗಳನ್ನು ತರುವ ಕೆಲಸವನ್ನು ಬಸವನಿಗೆ ವಹಿಸಿದರು. ಬಸವ ಸಂತೋಷದಿಂದಲೇ ಈ ಕೆಲಸವನ್ನು ಒಪ್ಪಿಕೊಂಡರು. ಈ ವರೆಗೆ ಇದ್ದ ಮಾನಸಿಕ ತಳಮಳ ವೇದನೆ ಮಾಯವಾಗಿ ಮನಸ್ಸಿಗೆ ಶಾಂತಿ ಲಭಿಸಿತು.

ಈಶಾನ್ಯ ಗುರುಗಳ ಸನ್ನಿಧಿಯಲ್ಲಿ ಶೈವ ಸಂಪ್ರದಾಯ ಶಿಕ್ಷಣ ದೊರೆಯಿತು. ಬಾಗೇವಾಡಿಯಲ್ಲಿ ವೇದ ಸಂಪ್ರದಾಯ ಶಿಕ್ಷಣದ ಸಾರ ತಿಳಿದಿದ್ದರು. ಇಲ್ಲಿ ಶಿವಾಗಮ, ಶಿವ ಪುರಾಣಗಳ ಶಿವಭಕ್ತರ ಕಾವ್ಯಭ್ಯಾಸದಿಂದ ಅನೇಕ ಹೊಸ ವಿಚಾರಗಳನ್ನು ತಿಳಿದುಕೊಂಡರು.



ಗುರು, ಲಿಂಗ, ಜಂಗಮ ಈ ಮೂರರ ಮಹತ್ವ ಅರಿತರು. ವೀರಶೈವ ಧರ್ಮ ವರ್ಣಾಶ್ರಮಗಳನ್ನು ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎನ್ನುವದನ್ನು ಗಣನೆಗೆ ತೆಗೆದುಕೊಳ್ಳುವದಿಲ್ಲ. ಇಷ್ಟಲಿಂಗ ಪಡೆದವರೆಲ್ಲ ಸರಿ ಸಮಾನರು. ಇಲ್ಲಿ ಜಾತಿಯ ಅಸಮಾನತೆ, ಆರ್ಥಿಕ ಅಸಮಾನತೆ, ಅಧಿಕಾರ ಪದವಿಗಳ ಅಸಮಾನತೆಯಿಲ್ಲ. ಒಟ್ಟನಲ್ಲಿ ಎಲ್ಲರೂ ಸಮಾನರು ಇಷ್ಟಲಿಂಗ ಪೂಜೆ, ಏಕದೈವೋಪಾಸನೆ, ಮಾನವ ಸಮಾನತೆ ಕಾಯಕನಿಷ್ಠೆ ಹಾಗೆಯೇ ತಾವು ಗುರುತಿಸಿ ಕೊಂಡ ಆದರ್ಶಗಳನ್ನು ಪಾಲಿಸುವ ಛಲ, ಸತ್ಯದಿಂದ ನಡೆಯುವ ಎದೆಗಾರಿಕೆ ನ್ಯಾಯನಿಷ್ಠುರತೆ ಮೊದಲಾದವುಗಳನ್ನು ತಮ್ಮ ಬಾಳಿನ ಬುತ್ತಿಯಲ್ಲಿ ಇರಿಸಿಕೊಂಡಿದ್ದರು. ಭಕ್ತಿ ಪಥವಿಡಿದು ಆಧ್ಯಾತ್ಮಿಕ ಸಾಧನೆ ಮುಂದು ವರಿಸಿದ ಬಸವೇಶ್ವರರು ನಮ್ಮ ಜನಾಂಗದಲ್ಲಿದ್ದ ಬಳಕೆಯಲ್ಲಿದ್ದ ಅನೇಕ ಅನಿಷ್ಠಗಳನ್ನು ಗುರುತಿಸಿದರು.

## 4. *ಸಂಗಮೇಶ್ವರ ಗುರುಗಳ ಪ್ರೀತಿಗೆ ಪಾತ್ರನಾದ ಬಸವಣ್ಣ :-*

ಕೂಡಲ ಸಂಗಮ ಒಂದು ಪುಣ್ಯ ಕ್ಷೇತ್ರವಾಗಿ, ಪ್ರಕೃತಿ ರಮ್ಯ ಸ್ಥಳವಾಗಿ ಕಂಗೊಳಿಸಿತು. ದೂರದಿಂದ ಪ್ರವಾಸಿಗರು, ಸಾಧು-ಸಂತರು ಯಾತ್ರಾರ್ಥಿಗಳು ಬರಹತ್ತಿದರು. ಸಂಗಮ ದೇಗುಲದಲ್ಲಿ ಬಂದಾಗ ಭಕ್ತಿಯಿಂದ ಮೈಮರೆತು ಕುಣಿಯುತ್ತಿದ್ದ ಬಸವನನ್ನು ಕಂಡು ಬೆರಗಾಗುತ್ತಿದ್ದರು. ಪ್ರತಿ ವರ್ಷ ಜಾತ್ರೆಯಲ್ಲಿ ಸಂಗಮೇಶ ಗುರುಗಳು ಭಕ್ತಿಯ ಕುರಿತು. ಮಾತನಾಡಲು ಹೇಳುತ್ತಿದ್ದರು. ಬಸವಣ್ಣನವರಲ್ಲಿ ಪಾಂಡಿತ್ಯ, ಭಾಷೆ, ಸರಳ ಶೈಲಿ ಎಲ್ಲರ ಮನಸ್ಸನ್ನು ಕೇಂದ್ರಿಕರಿಸುತ್ತಿತ್ತು. ಹೀಗಾಗಿ ಆ ಜಾತ್ರೆಯ ಕೇಂದ್ರ ಬಿಂದು ಬಸವನೇ ಆಗುತ್ತಿದ್ದನು.

ಜನರು ಬಸವಣ್ಣನನ್ನು ಅಭಿನಂದಿಸಲು ಹಾಗೂ ಸಂದೇಹಗಳನ್ನು ನಿವಾರಿಸಲು ಬರತೊಡಗಿದರು. ಎಲ್ಲ ವರ್ಗದ, ಎಲ್ಲ ಜಾತಿಯ ಜನ ಬಸವನ ಭಕ್ತಿ ನುಡಿಗಳನ್ನು ಕೇಳಲು ಜಾತ್ರೆಯ ನಂತರವೂ ಸೇರತೊಡಗಿದರು. ಹೀಗೆ ಧಾರ್ಮಿಕ ಹಾಗೂ ಸಾಮಾಜಿಕ ಮುಖಂಡತ್ವವನ್ನು ಹೊಂದಿದರು.

ಜನರೊಡನೆ ಹೆಚ್ಚು ಬೆರೆತಂತೆ ಹೆಚ್ಚೆಚ್ಚು ಅಂತರ್ಮುಖಿಯಾಗ ತೊಡಗಿದರು. ನಾನು ನಡೆಯುತ್ತಿರುವ ದಾರಿ ಸರಿಯಿದೆಯೇ, ಕೇವಲ ಭಕ್ತಿಯ ಆವೇಶಕ್ಕೆ ಒಳಗಾದರೆ ಏನು ಫಲ ? ದುಃಖ ಪಡದೇ ಮಾಡಿದವರ ಫಲ ಅನುಭವಿಸುವದು ಸರಿಯೇ ? ಕಾಯಕವಿಲ್ಲದೇ ಭಕ್ತಿಯ ಉಪದೇಶ ಮಾಡುವದು ತರವೇ ? ನನ್ನ ಅನ್ನವನ್ನು ಗಳಿಸದೇ ಅನ್ನ ಬಟ್ಟೆಗಳಿಗೂ ದೇವಾಲಯವನ್ನು ಆಶ್ರಯಿಸಬೇಕೇ ? ಎಂಬ ನೂರೆಂಟು ವಿಚಾರಗಳು ಉಂಟಾದವು.

ಕಾಯಕದಿಂದಲೇ ಬದುಕಬೇಕು ಎಂಬ ದೃಢ ನಿರ್ಧಾರವನ್ನು ಹೊಂದಿ ಅನುಮತಿಗಾಗಿ ಸಂಗಮೇಶ ಗುರುಗಳ ಹತ್ತಿರ ಧಾವಿಸಿ ಅವರ ಪಾದಕ್ಕೆ ಮನಿದು ಇಬ್ಬರೂ ನದಿಯ ದಂಡೆಯತ್ತ ನಡೆದರು "ಏನು ಬಸವಣ್ಣ ಗಾಢವಾಗಿ ಚಿಂತಿಸುತ್ತಿರುವಿಯಲ್ಲಾ ಇಷ್ಟು ಬೇಗ ಸಂಗಮೇಶ್ವರ ಬೇಸರವಾದನೇ ಎಂಬ ಗುರುಗಳ ಮಾತಿಗೆ ಬಸವಣ್ಣ ಛೇ ಛೇ ಎಂಥ ಮಾತು ಗುರುಗಳೇ ? ದೇವರನ್ನು ಮರೆಯುವದು ಸಾಧ್ಯವೇ ಆದರಲ್ಲಿ ಪೂಜ್ಯರೇ ಈ ಮೊದಲು ದೇವಾಲಯದ ಲಿಂಗದಲ್ಲಿ ಕಾಣುತ್ತಿದ್ದ ದೇವರು ಇದೀಗ ಎಲ್ಲಡೆಯಲ್ಲಿಯೂ ತೋರುತ್ತಿದ್ದಾನೆ. ಗಿಡ, ಮರ, ಹಕ್ಕಿ, ಚುಕ್ಕಿ, ಗಾಳಿ, ನದಿಯಲ್ಲೂ ಸಂಗಮನಾಥನೇ ತುಂಬಿ ತುಳುಕುತ್ತಿದ್ದಾನೆ, ಎಂದು ಉತ್ತರಿಸಿದರು. ಇದನ್ನು ಕೇಳಿದ ಸಂಗಮೇಶ ಗುರುಗಳು "ಭಲೇ ಬಸವ ನನ್ನಂಥವರು



ಸಾವಿರ ವರ್ಷ ಪೂಜಿಸಿದರೂ ಸಾಧಿಸಿದ್ದನ್ನು ನೀನು ಕೇವಲ ಒಂದು ವರ್ಷದಲ್ಲಿ ಸಾಧಿಸಿ ಬಿಟ್ಟೆ ಎಂದು ಸಂತೋಷಪಟ್ಟರು.

ಅದಕ್ಕೆ ಬಸವಣ್ಣ ದೇವರು ಸಂತೋಷವಾಗಿದ್ದರೆ ತಾನೇ, ನಾನು ಸಂತೋಷವಾಗಿರುವದು ? ಅಂದರೆ ದೇವರು ಬಡವ-ಬಲ್ಲಿದ, ದೀನ-ದಲಿತರಲ್ಲಿ ಅಸ್ಪೃಶ್ಯ ಜನಾಂಗದಲ್ಲಿ ಕಾಣುತ್ತಿದ್ದಾನೆ ಹಾಗೂ ನೋಯುತ್ತಿದ್ದಾನೆ, ನರಳುತ್ತಿದ್ದಾನೆ. ಕಾರಣ ಆತ ಹಾಗಿರುವಾಗ ನಾನು ಸಂತೋಷದಿಂದ ಇರುವದು ಹೇಗೆ ಸಾಧ್ಯ ? ಈ ಮಾತುಗಳಿಂದ ಗುರುಗಳ ಹೃದಯವೂ ತುಂಬಿ ಬಂದಿತು.

ನನಗೆ ಕಾಣುವ ದೇವರು ಎಲ್ಲರಿಗೂ ಕಾಣಬೇಕು. ಹಾಗಾದಲ್ಲಿ ಯಾರೊಬ್ಬರು ಯಾರನ್ನು ಹಿಂಸಿಸಲಾರರು. ನನ್ನೊಳಗಿನ ದೇವರನ್ನು ತೃಪ್ತಿಪಡಿಸುವ ಕಾರ್ಯ ನಾನು ದುಡಿಯುವದರಿಂದಲೇ ಆಗಬೇಕು.

ಕಲ್ಲು ಕಟ್ಟಿಗೆಯ ನಿರ್ಜೀವ ದೇವಾಲಯಕ್ಕಿಂತಲೂ ಪ್ರೀತಿ ವಿಶ್ವಾಸ ಭಕ್ತಿ ತುಂಬಿದ ಜೀವಂತ ದೇವಾಲಯದ ಅಗತ್ಯವಿದೆ. ಈ ಎಲ್ಲ ಮಾತುಗಳನ್ನು ಕೇಳಿ ಸಂಗಮೇಶ ಗುರುಗಳು ನಿಬ್ಬೆರಗಾಗಿ ಕುಳಿತರು. ಹದಿನೆಂಟು ವರ್ಷಗಳ ಈ ಯುವಕನಲ್ಲಿ ಎಂತಹ ಅದ್ಭುತ ಚೈತನ್ಯ. ಅಸಾಧಾರಣ ಚಿಂತನೆ ಮಡುಗಟ್ಟಿದೆ. ಬಸವಾ ನೀನು ಸಾಮಾನ್ಯನಲ್ಲ, ಅಸಾಮಾನ್ಯ ಅಸಾಮಾನ್ಯ ಎಂದು ಅಂದುಕೊಂಡರು.

### *5. ಕೋಶಾಗಾರದ ಗಣಕರಾಗಿ ಬಸವಣ್ಣ : -*

ಕಪ್ಪಡಿ ಸಂಗಮದ ಸಂಗಮೇಶ್ವರನ ಆಜ್ಞೆ ಮತ್ತು ಅನುಗ್ರಹ ಗಳನ್ನು ಪಡೆದುಕೊಂಡು, ಶಿವಜ್ಞಾನ ಸಂಪನ್ನರಾದ ಈಶಾನ್ಯ ಗುರುಗಳ ಆಶೀರ್ವಾದ ಪಡೆದುಕೊಂಡು ಬಸವೇಶ್ವರರು ನೇರವಾಗಿ ಮಂಗಳವಾಡಕ್ಕೆ ಬಂದರು.

ಕಪ್ಪಡಿ ಸಂಗಮ (ಕೂಡಲ ಸಂಗಮ)ವನ್ನು ಬಿಡುವದು ಅವರಿಗೆ ತುಂಬಾ ಕಷ್ಟದ ವಿಷಯವಾಗಿತ್ತು. ಅವರ ಇಷ್ಟ ದೈವವಾದ ಕೂಡಲ ಸಂಗನ ಸ್ಥಳ ಅವರಿಗೆ ತುಂಬಾ ಪ್ರೀಯವಾಗಿತ್ತು. ಆದರೆ ಕೂಡಲ ಸಂಗಮನಾಥ ಬಸವಣ್ಣನವರ ಕನಸಿನಲ್ಲಿ ಬಂದು ''ನಿನ್ನೊಂದಿಗೆ ನಾನು ಸದಾ ಇರುತ್ತೇನೆ ನೀನು ಮಂಗಳವಾಡಕ್ಕೆ ಹೋಗು'' ಎಂಬ ಆಜ್ಞೆಯ ಮೇರೆಗೆ ಕೂಡಲ ಸಂಗಮವನ್ನು ಬಿಡುವ ನಿರ್ಧಾರಕ್ಕೆ ಬಂದರು.

ಮಂಗಳವಾಡ ಈಗಿನ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪೂರ ಜಿಲ್ಲೆಯ ಒಂದು ಪಟ್ಟಣ. 12 ನೆಯ ಶತಮಾನದಲ್ಲಿ ಈ ಪ್ರದೇಶ ಚಾಲುಕ್ಯರ ವಶದಲ್ಲಿತ್ತು. ಕಲಚೂರಿ ವಂಶದ ಬಿಜ್ಜಳ ಚಾಲುಕ್ಯ ಚಕ್ರವರ್ತಿಯ 2 ನೆಯ ಜಗದೇಕ ಮಲ್ಲನ ಆಧೀನದಲ್ಲಿ ಮಹಾ ಮಂಡಲೇಶ್ವರ ಎನಿಸಿಕೊಂಡು ಮಂಗಳವಾಡೆಯ ಆಡಳಿತವನ್ನು ನಿರ್ವಹಿಸುತ್ತಿದ್ದನು.

ಈ ಸಮಯದಲ್ಲಿ ಬಸವಣ್ಣನ ಸೋದರ ಮಾವ ಬಲದೇವ ಕೋಶಾಧಿಕಾರಿಯಾಗಿದ್ದ. ಇತ್ತ ಮಂಗಳವಾಡೆಗೆ ಬಂದ ಬಸವಣ್ಣನನ್ನು ಬಲದೇವ ಆದರದಿಂದ ಸ್ವಾಗತಿಸಿದ ಎಷ್ಟಾದರೂ ಸೋದರ ಮಾವ, ಈಗಾಗಲೇ ಬಸವಣ್ಣನ ಜೀವನದ ಸಂಘರ್ಷ ಅರ್ಥವಾಗಿತ್ತು. ಬಸವಣ್ಣ ಬಂದ ಒಂದೆರಡು ದಿನಗಳಲ್ಲಿ ಬಲದೇವನಿಗೆ ತನ್ನ ಇಂಗಿತವನ್ನು ತಿಳಿಸಿದನು. ಹಿರಿಯ ಹುದ್ದೆಯಲ್ಲಿರುವ ಬಲದೇವನಿಗೆ ಬಸವಣಗಾಗಿ ಒಂದು ಉದ್ಯೋಗ ಕೊಡಿಸುವದೇನೂ ದೊಡ್ಡ ವಿಷಯವಾಗಿರಲಿಲ್ಲ. ''ಈಗ ಕೆಲವು ದಿನ ನನ್ನ ಜತೆ ಕೋಶಾಗಾರಕ್ಕೆ ಬಾ ಈಗ ಕೋಶಾಗಾರದ ವಾರ್ಷಿಕ ಲೆಕ್ಕ ನಡೆದಿದೆ ನಿನಗೆ ಕೆಲಸದ ಪರಿಚಯವಾದ ನಂತರ ಉದ್ಯೋಗದ ಬಗ್ಗೆ ವಿಚಾರಿಸೋಣ ಎಂಬುದಕ್ಕೆ ಬಸವಣ್ಣ ಒಪ್ಪಿಗೆ ಸೂಚಿಸಿದ.



ಬಸವಣ್ಣ ಉಳಿದ ವಿಷಯಗಳಲ್ಲಿ ಪಾಂಡಿತ್ಯವಿರುವಂತೆ ಗಣಿತದಲ್ಲಿ ಪರಿಣಿತರಾಗಿದ್ದರು. ಈಗ ಅದರ ಅವಶ್ಯಕತೆ ಉಂಟಾಯಿತು.

ಒಂದು ದಿನ ಕೋಶಾಗಾರಕ್ಕೆ ಬಲದೇವರೊಂದಿಗೆ ಹೋದಾಗ ಕರಣಿಕರ ಮುಖದಲ್ಲಿ ಗಡಿಬಿಡಿ, ಉದ್ವಿಗ್ನತೆ ಉಂಟಾಗಿತ್ತು. ಕೋಶಾಗಾರದಲ್ಲಿ ಒಂದು ವಾರದಿಂದಲೇ ಲೆಕ್ಕ ಪರಿಶೀಲನೆ ನಡೆದಿದೆ ಲೆಕ್ಕ ತಪ್ಪುತ್ತ ಹೊರಟಿದೆ ಎಂಬ ವಿಚಾರವನ್ನು ಬಲದೇವರಿಂದ ತಿಳಿದುಕೊಂಡು ''ತಮಗೆ ಆಕ್ಷೇಪಣೆ ಇಲ್ಲದಿದ್ದರೆ ನಾನೊಂದು ಸಲ ಲೆಕ್ಕ ಪರಿಶೀಲಿಸಬಹುದೆ ? ಎಂದು ಬಸವ ಕೇಳಿದರು. ಜಾಣತನಕ್ಕೆ ಹಿರಿದು ಕಿರಿದು ಭೇದವಿಲ್ಲ ಎಂದು ತಿಳಿದ ಬಲದೇವ ಅವಕಾಶ ಮಾಡಿಕೊಟ್ಟರು.

ಕೋಶಾಗಾರದಲ್ಲಿ 20 ಜನ ಕರಣಿಕರು ಬಸವೇಶ ಮೊದಲ ಮೂರು ಕರಣಿಕರ ಹತ್ತಿರ ಹೋಗಿ ನೋಡಿ ಎರಡನೆಯ ಕರಣಿಕರ ಹೊತ್ತಿಗೆಯಲ್ಲಿ ತಪ್ಪಾಗಿದ್ದು ಅದೇ ಮುಂದಿನ ಹೊತ್ತಿಗೆಗಳಲ್ಲಿ ಮುಂದುವರಿದಿದೆ. ಈಗ 2 ನೆಯ ಕರಣಿಕರ ಹೊತ್ತಿಗೆ ಪರಿಶೀಲಿಸಿದರೆ ಸಾಕು ಎಂದು ಬಸವಣ್ಣ ಸಭೆಯಲ್ಲಿ ತಿಳಿಸಲಾಗಿ ಎಲ್ಲರೂ ಸ್ತಬ್ಧವಾಯಿತು. ಒಂದು ವಾರದಿಂದ ತಲೆ ಕೆಡಿಸಿಕೊಂಡಿದ್ದ ಕೇವಲ ಕೆಲ ನಿಮಿಷಗಳಲ್ಲಿ ಪರಿಹರಿಸಿದರು. ಆಗ ಎಲ್ಲರಿಗೂ ಆಶ್ಚರ್ಯ ವಿಸ್ಮಯ ಉಂಟಾಯಿತು.

ಬಿಜ್ಜಳನ ಸಂಕೇತದಂತೆ ಬಸವಣ್ಣ ಸೂಚಿಸಿದ ಹೊತ್ತಿಗೆ ತರಿಸಲಾಯಿತು. ಲೆಕ್ಕ ಎಲ್ಲಿ ತಪ್ಪಿದೆ ಎಂಬುದನ್ನು ಬಸವಣ್ಣ ಬೆರಳಿಟ್ಟು ಬಲದೇವನಿಗೆ ತೋರಿಸಿದ. ಆಗ ರೂಪ, ಯೌವನ, ಸಾತ್ವಿಕತೆ, ಜಾಣ್ಮೆ ಸಂಗಮವೆನಿಸಿದ ಈ ವ್ಯಕ್ತಿ ನನ್ನ ರಾಜ್ಯಕ್ಕೆ ದೊಡ್ಡ ಆಸ್ತಿಯಾಗಬಲ್ಲ ಎಂದು ಬಿಜ್ಜಳನ ಮನಸ್ಸು ಯೋಚಿಸಿತು.

“ಬಸವಣ್ಣ ಅಂದಿನಿಂದ ಕೋಶಾಗಾರದ ಗಣಕರಾದರು. ಇಂದಿನಿಂದ ಕರ್ತವ್ಯಕ್ಕೆ ಹಾಜರಾಗಲು ಆದೇಶ ಹೊರಟಿತು.

ರಾಜ್ಯಾಡಳಿತದಲ್ಲಿ ಗಣಕ ಹುದ್ದೆ ಅತ್ಯಂತ ಪ್ರಮುಖವಾಗಿತ್ತು. ಆದರ್ಶ ಗಣಕನಿಗೆ ಇರಬೇಕಾದ ಎಲ್ಲ ಗುಣಗಳು ಬಸವಣ್ಣನಲ್ಲಿದ್ದವು ಬುದ್ದಿ ಮತ್ತೆ ಮತ್ತು ಶುಚಿತ್ವ ಬಸವಣ್ಣನಲ್ಲಿ ಮನೆಮಾಡಿದ್ದವು. ಬಿಜ್ಜಳ ಮತ್ತು ಸಿದ್ಧದಂಡಾದಿಪರು ಅವರ ಕೆಲಸ ನೋಡಿ ಸಂತೋಷಪಟ್ಟರು. ಕೆಲವೇ ಕಾಲದಲ್ಲಿ ಬಸವಣ್ಣನವರು ಮುಖ್ಯ ಬಂಢಾರಿಯೂ ಆಗಿ ಕಾರ್ಯ ನಿರ್ವಹಿಸಿದರು.

## *6. ವೈವಾಹಿಕ ಜೀವನದಲ್ಲಿ ಬಸವಣ್ಣ :-*

ಬಸವಣ್ಣನವರ ವೈವಾಹಿಕ ಜೀವನ ಸಂತೋಷಕರವಾಗಿತ್ತು. ಸ್ಥಾನ, ಅಧಿಕಾರ, ಖ್ಯಾತಿ ಇವೆಲ್ಲವೂ ಅವರಿಗೆ ಲಭ್ಯವಾಗಿದ್ದವು. ಗಣಕ ಹುದ್ದೆ ದೊರೆತ ಕೆಲವೇ ದಿನಗಳಲ್ಲಿ ಸೋದರಮಾವ ಬಲದೇವ ಮರಣ ಹೊಂದಿದ. ಅವನ ಪುತ್ರಿ ಗಂಗಾಂಬಿಕೆ ಏಕಾಕಿಯಾದಳು. ಅವಿವಾಹಿತೆ ಏನು ಮಾಡುವದು ಎಂಬ ಚಿಂತೆ ಪ್ರಾರಂಭವಾಯಿತು.

ಬಾಗೇವಾಡಿಯ ಅಗ್ರೇಸರನ ಮಗ ಜನಿವಾರ ಹರಿದು ಹಾಕಿ ಬಂದಿರುವ ಸುದ್ದಿ ಈಗಾಗಲೇ ಹರಡಿ ಹೋಗಿತ್ತು. ಸಮಾಜದಿಂದ ಬಹಿಷ್ಕೃತ ಕುಟುಂಬದ ಸದಸ್ಯನನ್ನು ಇಟ್ಟುಕೊಂಡಿದ್ದಕ್ಕಾಗಿ ಬಲದೇವನಿಗೆ ಸಮಸ್ಯೆ ಉಂಟಾಗಿತ್ತು. ಬಲದೇವನ ಮಗಳ ಗಂಗಾ ದೇವಿಯನ್ನು ಮದುವೆಯಾಗಲು ಯಾರೂ ಮುಂದೆ ಬರಲಿಲ್ಲ. ಇದಕ್ಕೆ ಉತ್ತರ ಬಸವಣ್ಣನಲ್ಲಿತ್ತು. ನನ್ನ ಕಾರಣಕ್ಕಾಗಿ ಈ ಕುವರಿ ಮದುವೆಯಾಗದೇ ಉಳಿಯಬೇಕೇ ? “ನನ್ನಿಂದ ಉಂಟಾದ ಸಮಸ್ಯೆಗೆ ನಾನೇ ಪರಿಹಾರ ಕಂಡುಕೊಳ್ಳಬೇಕು, ಎಂದುಕೊಂಡು ಗಂಗಾಂಭಿಯನ್ನು ವಿವಾಹವಾದರು.



ಬಲದೇವನ ಮರಣಾನಂತರ ಆ ಮುಖ್ಯ ಬಂಢಾರಿಯ ಸ್ಥಾನವನ್ನು ತುಂಬಲು ಬಿಜ್ಜಳನಿಗೆ ಬಸವಣ್ಣನಿಗಿಂತ ಅರ್ಹ ವ್ಯಕ್ತಿ ಬೇರೆ ಯಾರೂ ಕಾಣಲಿಲ್ಲ. ಬಸವಣ್ಣ ಈಗ ಬಂಢಾರಿ ಮಂಗಳವಾಡೆಯ ಮಹಾ ಮಂಡಲದ ಕೋಶಾಧಿಕಾರಿಯಾದರು.

ಬಲದೇವ ಅರಸನಿಗಿಂತ ಮೊದಲು ಸಿದ್ದರಸ ಕೋಶಾಧಿಕಾರಿಯಾಗಿದ್ದನು. ಸಿದ್ಧರಸನ ಪತ್ನಿ ಪದ್ಮಗಂಧಿ ಇವರ ಏಕೈಕ ಪುತ್ರಿ, ನೀಲಲೋಚನೆ (ನಿಲಾಂಬಿಕಾ) ಬಿಜ್ಜಳನ ತಮ್ಮ ವಲ್ಲುಗಿ ಎಳೆಯ ಮಗುವಿದ್ದಾಗಲೇ ತಾಯಿ ನಾಗಲಾದೇವಿ ತೀರಿಕೊಂಡಳು. ಆ ಮಗುವನ್ನು ಸಂರಕ್ಷಿಸುವ ಜವಾಬ್ದಾರಿ ಪದ್ಮಗಂಧಿ ವಹಿಸಿಕೊಂಡಳು. ವಲ್ಲುಗಿ ಮತ್ತು ನೀಲಲೋಚನೆ ಒಂದೇ ಮನೆಯಲ್ಲಿ ಅಣ್ಣ ತಂಗಿಯರಂತೆ ಬೆಳೆದರು. ಕೆಲಕಾಲ ನಂತರ ನೀಲಲೋಚನೆಯ ತಾಯಿ ತಂದೆಯರು ಅಕಾಲ ಮರಣಕ್ಕೆ ತುತ್ತಾದರು. ಬಿಜ್ಜಳ ನೀಲ ಲೋಚನೆಯನ್ನು ಅರಮನೆಯಲ್ಲಿ ಇರಿಸಿಕೊಂಡು ತನ್ನ ತಂಗಿಯಂತೆ ಸಾಕಿ ಸಲುಹಿದನು. ಒಡಹುಟ್ಟಿದ ತಂಗಿಯಂತೆ ತಿಳಿದು ಬೆಳಸಿದನು.

ಈ ಸನ್ನಿವೇಶದಲ್ಲಿ ಈಗಾಗಲೇ ಮಹಾಮಂಡಲದ ಕೋಶಾಧಿಕಾರಿ ಬಸವಣ್ಣನಿಗೆ ಅವನ ಕಾರ್ಯವನ್ನು ಮೆಚ್ಚಿ ಬಿಜ್ಜಳನು ತನ್ನ ತಂಗಿಯನ್ನು ಕೊಟ್ಟು ಮದುವೆ ಮಾಡಿದನು. ಈ ಮದುವೆಯಲ್ಲಿ ಗಂಗಾಂಭಿಕೆಯ ಪಾತ್ರ, ಇರಲಿಲ್ಲವೆಂದು ಹೇಳುವಂತಿರಲಿಲ್ಲ. ಮೊದಲಿನಿಂದಲೂ ಅವರಿಬ್ಬರೂ ಗೆಳತಿಯರಾಗಿದ್ದರು. ಈಗ ಜೀವನಪರ್ಯಂತ ಜೊತೆಯಾಗಿರುವ ಅವಕಾಶ ದೊರಕಿದ ಫಲವಾಗಿ ಅವಳ ಸಂತೋಷಕ್ಕೆ ಎಣೆಯಿರಲಿಲ್ಲ.

ನೀಲಲೋಚನೆ ವಿವಾಹವಾದ ನಂತರ ಕೋಶಾಗಾರದ ಅತ್ಯಂತ ಉನ್ನತ ಹುದ್ದೆಗೆ ಏರಿದ ಬಸವಣ್ಣನವರು ಬಸವದಂಡನಾಯಕ

ಎನಿಸಿಕೊಂಡರು. ರಾಜ್ಯದ ಹಣಕಾಸಿನ ವ್ಯವಹಾರವೆಲ್ಲವೂ ಅವರ ಅಧಿಕಾರ ವ್ಯಾಪ್ತಿಗೆ ಸೇರಿತ್ತು.

ಬಂಢಾರಿಗಳ ವಾಸಕ್ಕೆ ಭವ್ಯವಾದ ಮನೆ ದೊರಕಿತು. ಪತ್ನಿಯರಾದ ಗಂಗಾಂಬಿಕೆ ಮತ್ತು ನೀಲಾಂಬಿಕೆಯರಿಂದ ತನ್ನ ಕೆಲಸ ಕಾರ್ಯಗಳಿಗೆ ಉತ್ತಮ ಸಹಕಾರ ದೊರೆಯಿತು. ಅಕ್ಕ ನಾಗಮ್ಮನ ಆಶೀರ್ವಾದದ ಬಲದಿಂದ ಉತ್ತಮ ಅವಕಾಶಗಳು ತಾವಾಗಿಯೇ ಬಂದೊದಗುತ್ತಿದ್ದವು. ಬಾಲಕ ಚನ್ನಬಸವನ ಒಡನಾಟ ಎಲ್ಲರಿಗೂ ಸಂತಸದಾಯಕವಾಗಿತ್ತು. ಇದು ಬಸವಣ್ಣನವರಿಗೆ ಹರ್ಷದಾಯಕ ದಿನಗಳಾಗಿದ್ದವು.

ಬಸವಣ್ಣವನರ ಇಬ್ಬರು ಮಡದಿಯರು ಸುಶಿಕ್ಷಿತರಾಗಿದ್ದರು. ಅವರು ಬಸವಣ್ಣನವರನ್ನು ಸಂಪೂರ್ಣ ಅರ್ಥ ಮಾಡಿಕೊಂಡಿದ್ದರು. ಅವರ ಕ್ರಿಯಾಶೀಲ ಜೀವನಕ್ಕೆ ತುಂಬಾ ಸಹಕಾರಿಯಾಗಿದ್ದರು.

ಬಸವಣ್ಣನವರಿಗೆ ಹಣ ಹಾಗೂ ಅಧಿಕಾರಗಳು ಅನುಕೂಲಕರವಾಗಿ ಒದಗಿದವು. ಅದರಿಂದ ಅವರು ಭ್ರಷ್ಟರಾಗದೇ ಇನ್ನಷ್ಟು ವನೀತರಾದರು. ಬಡವರಿಗಾಗಿ, ಶಿವಭಕ್ತರಾದ ಜಂಗಮರಿಗೆ ಸಂಪತ್ತನ್ನು ಖರ್ಚು ಮಾಡಲು ಮುಂದಾದರು. ಬಸವಣ್ಣನವರು ಕೇವಲ ಗೃಹಸ್ಥ ಜೀವನವಾಗದೇ ಸಂಪೂರ್ಣ ಶರಣ ಜೀವನವಾಯಿತು. ಅವರ ಮನೆ ಆಡಂಬರದ ಮನೆಯಾಗದೇ ಅತ್ಯಂತ ಸರಳ ಹಾಗೂ ಶರಣರನ್ನು ಹಾರೈಸುವ ಮಹಾಮನೆಯಾಗಿತ್ತು. ಶರಣ ಧರ್ಮ ಚರ್ಚೆ ನಡೆಯುತ್ತಿದ್ದವು. ಸ್ವತಃ ಗಂಗಾಂಬಿಕಾ ನಿಲಾಂಬಿಕೆಯರು ವಚನಗಳನ್ನು ಬರೆದರು. ಗಂಗಾ ಪ್ರೀಯ ಕೂಡಲ ಸಂಗಮದೇವ ಎನ್ನುವದು ಗಂಗಾಂಬಿಕೆಯ ವಚನ ಅಂಕಿತವಾದರೆ, ಸಂಗಯ್ಯ ಎಂಬುದು ನೀಲಾಂಬಿಕೆಯ ವಚನ ಅಂಕಿತವಾಗಿತ್ತು. ಬಸವಣ್ಣನವರು ಗೃಹಸ್ಥ



ಜೀವನದಲ್ಲಿದ್ದರೂ ಸಾಮಾಜಿಕ ಸಂಬಂಧಗಳನ್ನು ಗಾಢವಾಗಿ ಬೆಳಸಿಕೊಂಡು ಆಧ್ಯಾತ್ಮಿಕ ಚಿಂತನೆಯಲ್ಲಿ ತೊಡಗಿದರು. ಪ್ರಪಂಚದಲ್ಲಿದ್ದುಕೊಂಡೆ ಪಾರಮಾರ್ಥದ ಸಾಧನೆ ಮಾಡುವ ಧ್ಯೇಯ ಅವರದಾಗಿತ್ತು. ''ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ'' ಎಂಬುದನ್ನು ಬಸವಣ್ಣನವರು ಬಲ್ಲವರಾಗಿದ್ದರು.

## 7. ಧಾರ್ಮಿಕ ವಿಚಾರಗಳಲ್ಲಿ ಬಸವಣ್ಣನವರು : -

ಕಪ್ಪಡಿ ಸಂಗಮದಲ್ಲಿ ಬಸವಣ್ಣನವರು ಒಬ್ಬ ವ್ಯಕ್ತಿಯಾಗಿದ್ದರು. ಆದರೆ ಮಂಗಳವೇಡದಲ್ಲಿ ಅವರು ಜನಸಾಮಾನ್ಯರ ನಾಯಕರಾಗಿದ್ದರು. ಹಾಗೂ ಸಮಾಜ ಸುಧಾರಕರು, ಕ್ರಾಂತಿಯೊಂದರ ಮುಖಂಡರಾಗಿದ್ದರು. ಆಧ್ಯಾತ್ಮಿಕ ಸಾಧನೆ ಸಾಮಾಜಿಕ ಚಟುವಟಿಕೆಗಳೂ ಜೊತೆ ಜೊತೆಯಾಗಿ ಸಾಗಿದವು.

ರಾಜ್ಯದ ಸೇವೆಯನ್ನು ಮಾಡುತ್ತಲೇ ಬಸವೇಶ್ವರರು ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡರು. ಮಾನವರಿಗೆಲ್ಲ ಉಪಯುಕ್ತವಾಗುವ ರೀತಿಯಲ್ಲಿ ಧಾರ್ಮಿಕ ಚಟುವಟಿಕೆಗಳನ್ನು ಕೈಕೊಂಡರು. ತಮ್ಮ ಹಣವನ್ನು ಕೊನೆಯ ಕಾಸಿನವರೆಗೂ ಅವರು ಧಾರ್ಮಿಕ ಉದ್ದೇಶಗಳಿಗಾಗಿ ವ್ಯಯ ಮಾಡಿದರು.

ಬಸವಣ್ಣನವರು ಆಚರಿಸಿದ ಹಾಗೂ ಪ್ರಸಾರ ಮಾಡಿದ ಧರ್ಮವೇ ವೀರಶೈವ ಧರ್ಮವಾಗಿತ್ತು. ಶಿವನ ಬಗ್ಗೆ ಏಕಾಗ್ರ ಮನಸ್ಸಿನ ಭಕ್ತಿಯನ್ನು ಹೊಂದಿರಬೇಕೆಂದು ವೀರಶೈವ ಧರ್ಮ ಒತ್ತಾಯ ಪಡಿಸುತ್ತದೆ. ವೀರಶೈವರ ದೃಷ್ಟಿಯಲ್ಲಿ ಶಿವನೇ ಶ್ರೇಷ್ಠನಾಗಿದ್ದಾನೆ. ತಮ್ಮ ದೇಹದ ಮೇಲೆ ಲಿಂಗ ಧರಿಸುವವರೇ ಲಿಂಗಾಯತರು. ದೇವಾಲಯಕ್ಕೆ ಹೋಗದಂತೆ ಮನೆಯಲ್ಲಿ ದೇವರ ಪೂಜೆ ನಡೆಯಬೇಕು. ಕೊರಳಲ್ಲಿ ಧಾರಣೆ ಮಾಡಿದ ಚಿಕ್ಕ ಚೊಕ್ಕ ಲಿಂಗವೇ

ಇಷ್ಟಲಿಂಗ. ಆ ಇಷ್ಟ ಲಿಂಗವನ್ನು ಒಂದು ತುಂಡು ಬಟ್ಟೆಯಲ್ಲಿ ಸುತ್ತಿ ಕೊರಳಲ್ಲಿ ಕಟ್ಟಿಕೊಳ್ಳುವದು ಸಾಮಾನ್ಯವಾದ ಪದ್ಧತಿಯಾಗಿತ್ತು. ಲಿಂಗವೆಂಬ ಲಾಂಛನ ಪ್ರೀತಿಯ ದ್ಯೋತಕ, ಮರೆತರೆ ಅದೊಂದು ಕಲ್ಲು ಆದುದರಿಂದ ನಿಜವಾದ ಭಕ್ತ ಗುರುಲಿಂಗ ಜಂಗಮರಲ್ಲಿ ಅನನ್ಯವಾದ ಭಕ್ತಿ ಇಡಬೇಕು ಎಂಬುದನ್ನು ತಿಳಿಸಿದರು.

ಬಸವಣ್ಣನವರು ಕೈಕೊಂಡ ಸತತ ಪ್ರಯತ್ನದ ಫಲವಾಗಿ "ಸ್ಥಾವರ ಲಿಂಗಕ್ಕಿಂತ ಮಿಗಿಲಾದದ್ದು ಜಂಗಮ ಲಿಂಗ ಎಂಬ ಭಾವನೆ ಅವರ ಅನುಯಾಯಿಗಳಲ್ಲಿ ಬೇರೂರಿತು. ಈ ಜಂಗಮ ಲಿಂಗಕ್ಕೆ ದಿನದಲ್ಲಿ ಎರಡು ಸಾರೆ ಪೂಜೆ ಸಲ್ಲಿಸುವ ಪದ್ಧತಿ ರೂಢಿಗೆ ಬಂದಿತು. ಸಾಕಾರ ಶಿವನಿಗೆ ಇಲ್ಲಿ ಸ್ಥಾನವಿರಲಿಲ್ಲ. ಅಂದರೆ ಬಸವಣ್ಣನವರು ಮೂರ್ತಿ ಪೂಜೆಗೆ ಅವಕಾಶ ಮಾಡಿ ಕೊಡಲಿಲ್ಲ. ದೇವರು ಸರ್ವಾಂತರ್ಯಾಮಿ ಎಂದ ಮೇಲೆ ದೇವಾಲಯದಲ್ಲಿ ಅವನನ್ನು ಕಾಣಬೇಕು ಎಂಬುದು ಹಾಸ್ಯಾಸ್ಪದ ದೇವರು ನಮ್ಮಲ್ಲಿ ಇದ್ದಾನೆ. ಪರಮಾತ್ಮನ ನೆಲೆ ಆತ್ಮದಲ್ಲಿ ಹೀಗಿರುವಾಗ ಸಾಂಕೇತಿಕ ಸ್ವರೂಪದ ಇಷ್ಟಲಿಂಗವನ್ನು ಧರಿಸಿ ದೇಹವೇ ದೇಗುಲ ಎಂದು ಭಾವಿಸಬಾರದೇಕೆ ? ಎಂಬುದು ಬಸವಣ್ಣನವರ ವಿಚಾರವಾಗಿತ್ತು.

"ದೇವನೊಬ್ಬ ನಾಮ ಹಲವು" ಕಾರಣ ನೂರೆಂಟು ದೇವರುಗಳ ಅಂಧ ಪರಂಪರೆಯನ್ನು ತೊಡೆದು ಹಾಕಿ, ಲಿಂಗ ಪೂಜಾ ನಿಷ್ಠೆಯನ್ನು ಪ್ರಚಾರಗೊಳಿಸಿದರು.

"ಇಬ್ಬರು ಮೂವರು ದೇವರೆಂದು
ಉಬ್ಬಿ ಮಾತನಾಡ ಬೇಡ
ಒಬ್ಬನೇ ಕಾಣಿರೋ!"



ಇಬ್ಬರೆಂಬುದು ಹುಸಿ ನೋಡಾ ! ಎಂದು ಬಸವಣ್ಣನವರು ನುಡಿದರು. "ಅನ್ಯ ದೈವವೆಂಬುದು ಹಾದರ ಕಾಣಿರೋ" ಎಂದೇ ಕಟುವಾಗಿ ಹೇಳುತ್ತಿದ್ದರು. ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲ ಸಂಗಮ ದೇವ" ಎಂದು ನಂಬಿದ್ದರು. ದಯಾ ಗುಣವನ್ನು ಎತ್ತಿ ಹಿಡಿದು "ದಯೆವಿಲ್ಲದ ಧರ್ಮವು ಯಾವುದಯ್ಯ ದಯವಿರಬೇಕು ಸಕಲ ಪ್ರಾಣಿಗಳಲ್ಲಿ" ಎಂಬ ತಿಳುವಳಿಕೆಯನ್ನು ಮೂಡಿಸಿ ಪ್ರಾಣಿ ಪ್ರೀತಿಯನ್ನು ಬೆಳೆಸಿದರು. ಯಾವ ಜಾತಿ ಕುಲಗಳಲ್ಲಿ ಹುಟ್ಟಿರಲಿ ಮಾನವ ಕುಲವೆಲ್ಲ ಒಂದು ಎಂಬ ಭಾವನೆಯನ್ನು ಬೆಳೆಸಿದರು.

"ಇವನಾರವ ಇವನಾರವ ಎಂದೆನಿಸರಯ್ಯಾ
ಇವ ನಿಮ್ಮವ, ಇವ ನಿಮ್ಮವ ಎಂದನಿಸಯ್ಯಾ
ಕೂಡಲ ಸಂಗಮದೇವಾ"

ಹೀಗೆ ಸಕಲರನ್ನು ಸನಿಹದಲ್ಲಿ ಕಂಡ ಸೋದರ ಭಾವ ಅವರದು. ಪರಸ್ಪರ ಆತ್ಮಿಯ ಬಾಂಧವ್ಯ ಬೆಳೆಸುವ ಹೊಸ ನಿಲುವನ್ನು ಬಳಕೆಗೆ ತಂದರು. ವಿಶ್ವದ ಕಲ್ಯಾಣ ಮಾರ್ಗವನ್ನು ತೋರಿದರು.

ವೀರಶೈವ ಧರ್ಮವನ್ನು ಹಮ್ಮಿಕೊಂಡವನು ನಿಯುಕ್ತ ಗುರುಗಳಿಂದ ಶಿವದೀಕ್ಷೆ ಪಡೆದು ಇಷ್ಟಲಿಂಗ ಧರಿಸಬೇಕಾಗಿತ್ತು. ಗುರುವೇ ಪರಬ್ರಹ್ಮ ಅರ್ಥಾತ್ ಪರಶಿವನು ಎನ್ನುತ್ತಿದ್ದರು. ಗುರುವು ಭಕ್ತನಿಗೆ ಲಿಂಗಧಾರಣೆ ಮಾಡಿ ಶಿವಮಂತ್ರ ಬೋಧಿಸುತ್ತಾನೆ. ಇದುವೆ ಲಿಂಗದೀಕ್ಷೆ ಕಾರಣ ಗುರುವಿನ ನಡೆನುಡಿ ಶುದ್ಧವಾಗಿರಬೇಕು. ಅಂದರೆ ಮಾತ್ರ ಗುರುವು ಆದರ್ಶ ಪ್ರಾಯವಾಗುವನು.

ಇಷ್ಟಲಿಂಗ ಬ್ರಹ್ಮಾಂಡದ ಪ್ರತೀಕ ಆ ಲಿಂಗವೇ ಪರಶಿವನು. "ಎಲ್ಲ ಇಚ್ಛೆಗಳನ್ನು ಪೂರ್ತಿಗೊಳಿಸುವ ಓಂಕಾರ ಪ್ರಣವೇ ಲಿಂಗವು"

"ಲಿಂಗ ಮಧ್ಯೆ ಜಗತ್ ಸರ್ವಂ" ಅಂದರೆ ಲಿಂಗದಲ್ಲಿ ವಿಶ್ವ ಅಡಗಿದೆ. ಲಿಂಗ ಮಧ್ಯೆ ಜಗತ್ ಸರ್ವಂ ಲಿಂಗವಾಗುತ್ತದೆ. ಎಂಬುದನ್ನು ತಿಳಿಸಿ ಲಿಂಗ ಸೋಂಕಿದ ಅಂಗವು ಲಿಂಗವಾಗುತ್ತದೆ. ಎಂಬುದನ್ನು ತಿಳಿಸಿ ಕೊಟ್ಟರು. ಅದೇ ರೀತಿಯಾಗಿ ಜಂಗಮನು ಇಹ ಸುಖವ ತೊರೆದು ವಿರಾಗಿಯಾಗಿರುವ ತ್ಯಾಗ ಮೂರ್ತಿಯಾಗಿರಬೇಕು. ಧರ್ಮ ಪ್ರಸಾರವೇ ಆತನ ಮುಖ್ಯ ಕಾರ್ಯವಾಗಬೇಕು. ಭಕ್ತರಿಗೆ ಶಿವ ಧರ್ಮ ತಿಳಿಸುವವ ಜಂಗಮ ಲಿಂಗದ ಮಹಿಮೆ ಅರಹುವವನೇ ಅವನೇ ! ಆದ ಕಾರಣ ಭಕ್ತನು ತನು ಮನ ಧನಗಳನ್ನು ಗುರು ಲಿಂಗ ಜಂಗಮಕ್ಕೆ ಅರ್ಪಿಸಬೇಕು ಅದೇ ತ್ರಿವಿದ ದಾಸೋಹ. ಅನಾಚಾರಿ ಗುರುಗಳಾದ ಅಯ್ಯನವರು ನಿಜಜಂಗಮರಲ್ಲ. ಜಂಗಮ ಪದ ಜಾತಿ ಸೂಚಕವಲ್ಲ ಜಂಗಮತ್ವ ಲಭಿಸುವದು ಆಚಾರದಿಂದ ಹುಟ್ಟಿನಿಂದಲ್ಲ ಆಚಾರವಂತ ಭಕ್ತರೂ ಜಂಗಮರು ಶಿವಯೋಗಿಗಳು ಆಗಬಹುದು ಎಂದು ಹೇಳಿದ್ದಾರೆ.

ಬಸವಣ್ಣನವರು ಗುರುಲಿಂಗ ಜಂಗಮವನ್ನು ತಿಳಿಸಿಕೊಟ್ಟಂತೆ ವಿಭೂತಿಯ ಮಹತ್ವವನ್ನು ತಿಳಿಸಿಕೊಟ್ಟರು. ನಿಜ ಭಕ್ತನಿಗೆ ವಿಭೂತಿಯೇ ಅಲಂಕಾರ ಕಾರಣ ಪ್ರತಿಯೊಬ್ಬ ವೀರಶೈವನು ಹಣೆಯ ಮೇಲೆ ವಿಭೂತಿ ಧರಿಸುವರು. ವಿಭೂತಿ ಪರಶಿವನ ತೇಜಸ್ಸು, ಕಾಮವನ್ನು ದಹಿಸುವದರ ಸಂಕೇತವು ಅದಾಗಿದೆ. ಅದರ ಧಾರಣೆಯಿಂದ ಮಲತ್ರಯಗಳು ಭಸ್ಮವಾಗುವವು. ಕೂಡಲ ಸಂಗನ ನೊಸಲಿಗೆ ವಿಭೂತಿಗೆ ಶೃಂಗಾರ ಎಂದು ಬಸವಣ್ಣನವರು ಭೋದಿಸಿದುಂಟು. ಹೀಗೆ ಅನೇಕ ಧಾರ್ಮಿಕ ಆಚರಣೆಗಳನ್ನು ಕೈಕೊಂಡು ಆಧ್ಯಾತ್ಮಿಕ ಚಿಂತನೆಯಲ್ಲಿ ತೊಡಗಿ ಬಸವೇಶ್ವರರು ಒಬ್ಬ ವ್ಯಕ್ತಿಯಾಗಿ ಉಳಿಯದೇ ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಶಕ್ತಿಯಾದರು.



## 8. ಕಲ್ಯಾಣದಂಗಳದಲ್ಲಿ ಬಸವಣ್ಣನವರು :-

ಬಿಜ್ಜಳನ ತಂದೆ ಪೆರ್ಮಾಡಿ, ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯನ ಮಗಳಾದ ಚಂದಲದೇವಿಯನ್ನು ಮದುವೆಯಾಗಿ ಚಕ್ರವರ್ತಿಯ ಅಳಿಯನಾಗಿದ್ದ. ಉತ್ತರಾಧಿಕಾರಿಯಾದ 3 ನೆಯ ಸೋಮೇಶ್ವರ ದುರ್ಬಲ ಅರಸು. ಪೆರ್ಮಾಡಿಯ ಸಲಹೆ ಸೂಚನೆಗಳನ್ನು ಆಗಾಗ ಪಡೆಯುತ್ತಿದ್ದ ಇವನ ನಂತರ ಬಂದ ತೈಲ ಅಸಮರ್ಥ ಚಕ್ರವರ್ತಿ ಮುಂದೆ ಚಾಲುಕ್ಯ ಸಾಮ್ರಾಜ್ಯದ ಆಡಳಿತ ಶಿಥಿಲಗೊಂಡಿತು. ಅಲ್ಲಲ್ಲಿ ಸಣ್ಣ ಪುಟ್ಟ ದಂಗೆಗಳಾದವು. ಮಾಂಡಲಿಕರು ಸ್ವತಂತ್ರರಾಗಲು ಹವಣಿಸುತ್ತಿದ್ದರು. ಕೊನೆಗೊಮ್ಮೆ ಬಿಜ್ಜಳ ಅಸಮರ್ಥ ತೈಲನನ್ನು ಪಕ್ಕಕ್ಕೆ ಸರಿಸಿ **1162** ರಲ್ಲಿ ತಾನೆ ಕಲ್ಯಾಣದ ಚಕ್ರವರ್ತಿಯಾದ ಕಲ್ಯಾಣಕ್ಕೆ ಬದಲಿಸಿಕೊಂಡನು.

ರಾಜಧಾನಿಯ ಸ್ಥಳಾಂತರದಿಂದ ಬಸವಣ್ಣನವರ ಕಾರ್ಯ ಚಟುವಟಿಕೆಗಳ ಮೇಲೆ ತುಂಬಾ ಪ್ರಭಾವ ಬೀರಿತು. ಈಗ ಅವರು ಹಿರಿಯ ಸಾಮ್ರಾಜ್ಯವೊಂದರ ಮುಖ್ಯ ಭಂಡಾರಿಯಾದರು.

ಚಾಲುಕ್ಯರ ರಾಜಧಾನಿಯಾದ ಕಲ್ಯಾಣ ಈಗ ಅದು ಬೀದರ ಜಿಲ್ಲೆಗೆ ಸೇರಿರುವಂಥ ಒಂದು ಚಿಕ್ಕ ಪಟ್ಟಣ. ಬಸವಣ್ಣನವರ ಹೆಸರು ಪಡೆದ ಇದು ಈಗ ಬಸವಕಲ್ಯಾಣವೆನಿಸಿದೆ.

ಮಂಗಳವೇಡದಲ್ಲಿ ಬಸವಣ್ಣನ ವಿಚಾರ ತಾತ್ವಿಕ ರೂಪ ಹೊಂದಿದ್ದರೆ ಕಲ್ಯಾಣದಲ್ಲಿ ಪ್ರಯೋಗಾತ್ಮಕ ರೂಪದಲ್ಲಿ ಹೊರ ಬಂದವು. ಬಸವಣ್ಣನವರು ಕಲ್ಯಾಣ ಸಾಮ್ರಾಜ್ಯದ ಆಡಳಿತದಲ್ಲಿ ಹೆಚ್ಚಿನ ಜವಾಬ್ದಾರಿ ವಹಿಸಿಕೊಂಡ ನಂತರ ತಮ್ಮ ಕಾರ್ಯ ದಕ್ಷತೆಯಿಂದ ನಿರ್ವಹಿಸಿ ರಾಜ್ಯದ ಸಂಪತ್ತು ಅಭಿವೃದ್ಧಿಯಾಗುವಂತೆ ಮಾಡಿದರು.

ಬಿಜ್ಜಳನು ಬಸವೇಶ್ವರರ ಕಾರ್ಯದ ಬಗ್ಗೆ ತುಂಬಾ ವಿಶ್ವಾಸವುಳ್ಳವನಾಗಿ ಸಂತೃಪ್ತಿಯಿಂದ ಇದ್ದನು.

ಬಸವಣ್ಣನವರು ತಮಗೆ ಒಪ್ಪಿಸಿದ ಕಾರ್ಯಗಳನ್ನು ನಿಷ್ಠೆಯಿಂದ ಮಾಡುತ್ತಾ ತಮ್ಮ ಅಂತರಂಗದ ಆದರ್ಶಗಳಾದ ಧಾರ್ಮಿಕ ಸಾಮಾಜಿಕ ಹಾಗೂ ಸಾಹಿತ್ಯಿಕ ಚಟುವಟಿಕೆಗಳಿಗೆ ಗಮನ ಹರಿಸಿದರು. ಇವರು ರೂಪಿಸಿಕೊಂಡಿದ್ದ ಮಹಾಮನೆ ಹಾಗೂ ಅನುಭವ ಮಂಟಪಗಳು ಪ್ರಗತಿಪರತೆಯನ್ನು ತೀವ್ರಗೊಳಿಸುತ್ತಲೇ ಕ್ರಾಂತಿಯ ಕೇಂದ್ರಗಳಾದವು.

ಪ್ರಾರಂಭದಲ್ಲಿ ಬಸವಣ್ಣನವರು ಹಾಗೂ ಬಿಜ್ಜಳನ ನಡುವೆ ವ್ಯವಹಾರಗಳು ಚನ್ನಾಗಿಯೇ ಸಾಗಿದವು. ಬಸವಣ್ಣನವರ ಸಾಮಾಜಿಕ ಕ್ರಾಂತಿಯ ವೇಗ ಪಡೆದು ತುಂಬಾ ಜನಪ್ರೀಯತೆ ಗಳಿಸಿತು. ಇವರದು ಸಂಪ್ರದಾಯಿಕ ಧರ್ಮದ ವಿರುದ್ಧವಾದ ಕ್ರಾಂತಿಯಾಗಿತ್ತು. ಅನೇಕ ಸಂಖ್ಯೆಯಲ್ಲಿ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದರು. ಇದು ಇತರ ಧರ್ಮದವರಿಗೆ ಭಯವನ್ನುಂಟು ಮಾಡಿತು.

ವ್ಯಕ್ತಿಗಳು ಧಾರ್ಮಿಕವಾಗಿ, ಸಾಮಾಜಿಕವಾಗಿ ಆರ್ಥಿಕವಾಗಿ ಸಮಾನರಾದಾಗಲೇ ಕಲ್ಯಾಣ ರಾಜ್ಯಕ್ಕೆ ಅರ್ಥ ಬರುತ್ತದೆ ಎಂದು ನಂಬಿದ್ದರು. ''ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಸಮಾಜ ನಿರ್ಮಾಣಕ್ಕೆ ಬಸವಣ್ಣನವರು ಯತ್ನಿಸಿದರು. ವ್ಯಕ್ತಿತ್ವದ ಶುದ್ಧಿಯೊಂದಿಗೆ ಸಮಾಜದ ಶುದ್ಧೀಕರಣವಾಗಬೇಕು ಎಂಬುದನ್ನು ಮನಗಂಡರು.

ಬಸವೇಶ್ವರರು ರಾಜನಲ್ಲಿ ಸೇವೆ ಮಾಡುವದು ಒಂದು ಮುಖವಾದರೆ, ಆತ್ಮಜ್ಞಾನ ಸಾಧಿಸುವದು ಮತ್ತೊಂದು ಮುಖವಾಗಿತ್ತು. ಇವರ ಸಾಧನೆ ವೈಯಕ್ತಿಕತೆಗೆ ಮೀಸಲಾಗಿರದೇ ಜನಸಮುದಾಯದ



ಸಿದ್ಧಿಯನ್ನು ಬಯಸಿದರು. ಅದಕ್ಕೆ ಅನಕೂಲಕರವಾಗುವಂತೆ ವಿವಿಧ ರೀತಿಯ ಕಾರ್ಯಕ್ರಮಗಳನ್ನು ರೂಪಿಸಿಕೊಂಡರು.

ಬಸವಣ್ಣನವರ ಕೀರ್ತಿ ಎಲ್ಲಡೆ ಹರಡಿತು. ಭಾರತದ ವಿವಿಧ ಕಡೆಗಳಿಂದ, ಭಾಗಗಳಿಂದ ಶರಣರು, ಶರಣೆಯರು ಕಲ್ಯಾಣಕ್ಕೆ ಬಂದರು ತಮ್ಮ ಸಾಧನೆಗೆ ಒಂದು ನೆಲೆಯನ್ನು ಕಂಡುಕೊಂಡರು.

''ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರದು ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿ ಮುಟ್ಟಿಸಲು ತೊಳಗಿ ಬೆಳಗುತಿರ್ದುದಯ್ಯಾ ಶಿವನ ಪ್ರಸಾದ'' ಹೀಗೆ ಅಲ್ಲಮ ಪ್ರಭುಗಳು ನುಡಿದಿದ್ದಾರೆ.

ಬಸವಣ್ಣನವರು ತಾವು ಮಾಡುವ ಕರ್ತವ್ಯದಲ್ಲಿ ದೇವರನ್ನು ಕಂಡರು ತಮ್ಮ ಅಧಿಕಾರಕ್ಕೆ ಸಮ್ಮಂಧಿಸಿದ ಕೆಲಸಗಳಲ್ಲದೇ ಇನ್ನೂ ಕೆಲವು ಸಾಮಾಜಿಕ ಕೆಲಸಗಳನ್ನು ನಿರ್ವಹಿಸಬೇಕಾಗುತ್ತಿತ್ತು. ದೇವರ ಕುರಿತು ಚಿಂತನೆಗೂ ಅವಕಾಶ ದೊರೆಯುತ್ತಿರಲಿಲ್ಲ.

ಉದಯಾಸ್ತಮಾನವೆನ್ನ ಬೆಂದು ಬಸುರಿಂಗೆ ಕುದಿಯಲಿಲ್ಲದೆ,<br>ನಿಮ್ಮ ನೆನೆಯಲು ತೆಲುಹಿಲ್ಲಯ್ಯ !<br>ಎಂತೋ ! ಲಿಂಗ ತಂದೆ ಎಂತಯ್ಯಾ ಎನ್ನ ಪೇರ್ವ ಲಿಖಿತ !<br>ಬೆರಣೆಯನಾಯಲಿಲ್ಲದೆ ಅಟ್ಟುಣ್ಣ ತೆರಹಿಲ್ಲ ವೆನಗೆ !<br>ನೀಕರುಣಿಸಾ ಕೂಡಲ ಸಂಗಮದೇವಾ !

ಆದರೆ ತಾವೇನೂ ಮಾಡಿದರೂ ಅದು ಸಮಾಜದ ಏಳ್ಗೆಗಾಗಿ ಎಂಬ ಸಮಾಧಾನ ಬಸವಣ್ಣನವರಿಗಿತ್ತು. ಬಸವಣ್ಣನವರು ಧಾರ್ಮಿಕ ವ್ಯಕ್ತಿಯಾಗಿದ್ದರೂ ಸ್ವಭಾವತಃ ಭಕ್ತರಾಗಿ ಪರಮಾತ್ಮನನ್ನು ಸಾಕ್ಷಾತ್ಕಾರಗೊಳಿಸಿಕೊಳ್ಳುವದೇ ಅವರ ಧ್ಯೇಯವಾಗಿತ್ತು. ಆದರೆ ಅವರೆಂದೂ

ಆಧ್ಯಾತ್ಮಿಕ ಧ್ಯೇಯ ಸಾಧನೆಗಾಗಿ ಐಹಿಕ ಕಾರ್ಯಗಳನ್ನು ಬಿಟ್ಟು ಬಿಟ್ಟವರಲ್ಲ. ಇಹಲೋಕದ ಎಲ್ಲ ಸಂಕ್ಷೋಭೆ ಹಾಗೂ ಸಮಸ್ಯೆಗಳೊಂದಿಗೆ ಅವರು ಜೀವನ ಸಾಗಿಸಿದರು. ಅವೆಲ್ಲವನ್ನು ಶಾಂತವಾಗಿಯೇ ಎದುರಿಸಿದರು.

ತಮ್ಮ ಅನುಯಾಯಿಗಳ ಸಂಖ್ಯೆ ಹೆಚ್ಚಿಸಿಕೊಂಡಂತೆ ಬಸವಣ್ಣನವರಿಗೆ ಅಷ್ಟೇ ಸಂಖ್ಯೆಯಲ್ಲಿ ಶತೃಗಳು ಹುಟ್ಟಿಕೊಂಡರು. ಅನ್ಯ ಜಾತಿಗಳ ವಿಡಂಬನೆ ಮಾಡುತ್ತಿದ್ದ ಬಸವಣ್ಣ ಶತೃಗಳನ್ನು ಎದುರಿಸಬೇಕಾಗುವದು ಸಹಜವೇ ಆಗಿತ್ತು. ''ಚತುರ್ವೇದಿಯಾದರೇನು ? ಲಿಂಗವಿಲ್ಲದವನು ಹೊಲೆಯ'' ''ವಿಪ್ರರು ನುಡಿದಂತೆ ನಡೆಯರು'' ''ಹಾರುವನ ಭಕ್ತಿ ಓಡಿನೊಳಗೆ ಅಗೆಯ ಹೊಯ್ದಂತೆ'' ''ಹರಿಹರನೊಂದೇ ಎಂದಡೆ ಸುರಿಯುವೆ ಬಾಯಲಿ ಬಾಲ ಹುಳಗಳು'' ಎಂಬ ಮಾತುಗಳಿಂದ ಮೇಲ್ಜಾತಿಯವರ ಮನ ನೊಯ್ಯುವಂತೆ ಮಾಡಿತ್ತು. ಹೆಚ್ಚು ಪ್ರಭಾವಶಾಲಿಯಾಗಿದ್ದ ಕೆಲವು ಅನ್ಯಮತಿಯರು ಬಸವಣ್ಣನವರ ಮೇಲೆ ಅಲ್ಲ ಸಲ್ಲದ ಆರೋಪ ಹೊರಿಸಿ ಬಿಜ್ಜಳನಿಗೆ ದೂರು ಕೊಟ್ಟರು. ರಾಜ್ಯದ ಬೊಕ್ಕಸದ ಹಣ ವೀರಶೈವ ಧರ್ಮಕ್ಕೆ ಖರ್ಚಾಗುವದು ಎಂದು ಆರೋಪ ಮಾಡಿದರು. ಆದರೆ ಬಸವಣ್ಣ ಆರೋಪಕ್ಕೆ ಮಣಿಯದೇ ರಾಜ್ಯದ ಸಂಪತ್ತು ಪ್ರಜೆಗಳಿಗೆ ಸೇರಿದ್ದು ಅದನ್ನು ದೀನದಲಿತರಿಗೆ ಖರ್ಚು ಮಾಡುವದು ನ್ಯಾಯವೆಂದು ಹೇಳಿದರು.

''ಆನೆ ಭಂಡಾರ, ಲಾಯದ ಕುದುರೆಯ ಬೇಡುವರಿಲ್ಲದೇ ಬಡವಾದನಯ್ಯಾ, ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ'' ಎಂಬುದಾಗಿ ಹೇಳಿದರು. ಅವರು ಒಪ್ಪಿಕೊಂಡ ರೀತಿ ತಪ್ಪು ಎಂದು ಸಾಧಿಸಲು ಮೇಲ್ಜಾತಿಯವರಿಗೆ ಯಾವದೇ ನೈತಿಕ ಬರಲಿಲ್ಲ.



ಬಸವಣ್ಣವರಿಗೆ ದೀನದಲಿತರಿಗಾಗಿ ಖರ್ಚು ಮಾಡಲು ಸೋದರ ಮಾವ ಬಲದೇವರು ಬಿಟ್ಟು ಹೋದ ಆಸ್ತಿ ಸವೆಯಲಾರದೆ ಉಳಿದಿತ್ತು. ಅದರೊಂದಿಗೆ ಸ್ವಂತ ಗಳಿಕೆಯೂ ಸಾಕಷ್ಟಿತ್ತು. ಶರಣರೂ ತಮ್ಮ ಆದಾಯದ ಒಂದಿಷ್ಟು ಭಾಗ ಕೊಡುತ್ತಿದ್ದರು. ಹೀಗಾಗಿ ಬಿಜ್ಜಳನ ನ್ಯಾಯಬಾಹಿರವಾಗಿ ಬಿಜ್ಜಳನ ಬೊಕ್ಕಸಕ್ಕೆ ಕೈಹಾಕುವ ಅಗತ್ಯವೇ ಇರಲಿಲ್ಲ. ಹಾಲಿನ ಹಳ್ಳವೇ ಮನೆ ಮುಂದೆ ಹರಿಯುತ್ತಿರಲು ಒದೆಯುವ ಹಸುವಿನ ಕೆಚ್ಚಲಿಗೆ ಕೈಯಿಕ್ಕಿ ಹಾಲು ಹಿಂಡುವ ಅಗತ್ಯವಿರಲಿಲ್ಲ. ಕಾಮಧೇನು ಮನೆಮುಂದೆ ಇರಲು ಬೇರೆ ಹಯನನರಸಲೇಕಯ್ಯಾ ಅವರೆಂದ ಪರಧನಕ್ಕಾಗಿ ಆಸೆ ಪಟ್ಟವರಲ್ಲ.

''ಹರಿವ ಹಾವಿಂಗಂಜೆ
ಉರಿವ ನಾಲಿಗೆಗಂಜೆ
ಸುರಗಿಯ ಮೊನೆಗಂಜೆ
ಒಂದಕ್ಕಂಬುವೆ ಒಂದಕ್ಕಳಕುವೆ
ಪರಸ್ತ್ರೀ ಪರಧನವೆಂಬ ಜೂಜಿಗಂಜುವೆ''

ಎಂದು ತಿಳಿದ ಬಿಜ್ಜಳನು ಯಾವದೇ ಕ್ರಮ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಬಿಜ್ಜಳ ಚಕ್ರವರ್ತಿಯಾಗಿದ್ದು ಬಹುಜನಾಭಿಪ್ರಾಯ ಕಡೆಗಣಿಸುವಂತಿರಲಿಲ್ಲ. ಅಡಕೋತಿನಲ್ಲಿ ಬೆಟ್ಟ (ಅಡಿಕೆ) ಸಿಕ್ಕಂತೆ ಅವನ ಪರಿಸ್ಥಿತಿಯಾಗಿತ್ತು. ರಾಜ್ಯದಲ್ಲಿ ನಡೆಯುವ ಕ್ರಾಂತಿಕಾರಿ ಬದಲಾವಣೆ ಸಹಿಸುವ ಸ್ಥಿತಿಯಲ್ಲೂ ಇರಲಿಲ್ಲ. ಸಂಪ್ರದಾಯ ಶೀಲರಾದ ಜನರ ಮನಸ್ಸಿಗೆ ನೋವುಂಟು ಮಾಡುವದು ಅವನಿಗೆ ಇಷ್ಟವಿರಲಿಲ್ಲ. ಆದ್ದರಿಂದ ಎಲ್ಲಿ ಅರಾಜಕತೆ ಉಂಟಾಗುವದೋ ಎಂಬ ಭಯದಲ್ಲಿ ಆತನಿದ್ದನು. ಬಿಜ್ಜಳಿಗೆ ದಿಕ್ಕು ತೋಚದಂತಾಯಿತು.

ಬಸವಣ್ಣನವರು ಯಾವುದನ್ನು ಹಚ್ಚಿಗೊಳ್ಳಲಿಲ್ಲ. ಮೇಲಾಗಿ ಯಾರ ಭಯವೂ ಅವರಿಗೆ ಇರಲಿಲ್ಲ. ಶಾಂತಚಿತ್ತರಾಗಿ ಸಮಸ್ಯೆಗಳನ್ನು ನಿವಾರಿಸುತ್ತಿದ್ದರು.

''ಆರು ಮುನಿದು ನಮ್ಮನೇನು ಮಾಡುವರಯ್ಯಾ ?
ಊರು ಮುನಿದು ಎಮ್ಮನೆಂತು ಮಾಡುವರು ?
ನಮ್ಮ ಕುನ್ನಿಗೆ ಕೂಸ ಕೊಡಬೇಡ
ನಮ್ಮ ಸೊಣಗಂಗೆ ತಣಿಗೆಯಲಿಕ್ಕಬೇಡ
ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೇ''

ಎಂಬ ಸತ್ಯವನ್ನು ಅಣ್ಣನವರು ಅರಿತವರಾಗಿದ್ದರು. ಶಾಂತ ಚಿತ್ತರಾಗಿ ಸಮಸ್ಯೆ ಎದುರಿಸಿದರು. ''ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ'' ಎಂಬ ನಂಬಿಕೆ ಅವರಲ್ಲಿ ಅಚಲವಾಗಿತ್ತು.

### 9. ಬಸವಣ್ಣನವರಿಂದ ಕಂಬಳಿನಾಗ, ಶಿವನಾಗಯ್ಯನಾದ ಪರಿ :-

ಕಂಬಳಿನಾಗದೇವ ಅಸ್ಪೃಶ್ಯ ಕಂಬಳಿ ನೇಯ್ಯುವದು ಆತನ ಕೆಲಸ (ಕಾಯಕ) ಒಂದು ಸಲ ಕಲ್ಯಾಣದಲ್ಲಿ ನಾಗ, ಕುಲಜರ ಹಿಂಸೆಗೆ ಒಳ ಗಾಗಿದ್ದ ಘಟನೆ ನಡೆದಿತ್ತು. ಬಸವಣ್ಣ ಬಿಜ್ಜಳನ ಅರಮನೆಗೆ ಕಾರ್ಯ ನಿಮಿತ್ಯ ಹೊರಟಾಗ ಇದನ್ನು ಕಂಡು ಅವನನ್ನು ಅಪ್ಪಿಕೊಂಡು ಮುಂದಾಗುವ ಅನಾಹುತವನ್ನು ತಪ್ಪಿಸಿದರು.

ಮೂರ್ಛೆಗೆ ಒಳಗಾದ ನಾಗಯ್ಯನನ್ನು ಉಪಚರಿಸಿ ಹಣೆಗೆ ಉಂಟಾದ ಗಾಯಕ್ಕೆ ಪಟ್ಟಿ ಕಟ್ಟಿ ಮನೆಗೆ ಕರೆದೊಯ್ದರು.



ಬಸವಣ್ಣನವರ ಸ್ಪರ್ಶ ನಾಗನ ಅರ್ಧನೋವು ಕಡಿಮೆಯಾಯಿತು. ವೈದ್ಯಕೀಯ ಉಪಚಾರವೂ ಆಯಿತು. ಕೆಲವು ದಿನಗಳ ನಂತರ ನಾಗಯ್ಯ ಚೇತರಿಸಿಕೊಂಡ.

ಈಗಾಗಲೇ ನಾಗ, ಕೇರಿಯಲ್ಲಿ ಬಸವಣ್ಣನವರು ಕೇಳಿದವರಿ ಗೆಲ್ಲ ಇಷ್ಟಲಿಂಗ ನೀಡುತ್ತಾರಂತೆ, ಇದಕ್ಕೆ ಯಾವದೇ ಜಾತಿಮತವಿಲ್ಲ ಇಷ್ಟಲಿಂಗಧಾರಿಗಳಾದ ಮೇಲೆ ಕುಲಜರು ಕುಲಹೀನರೂ ಸಮಾನರು, ಇಷ್ಟಲಿಂಗ ಧರಿಸಿದ ಮೇಲೆ ದೇವಾಲಯದ ಅವಶ್ಯಕತೆ ಇಲ್ಲ. ಲಿಂಗ ಧರಿಸಿದವರು ಲಿಂಗಾಯಿತರು ಹಾಗೂ ಶರಣರು ಎಂದು ಕರೆಯುವರು ಎಂಬ ವಿಚಾರಗಳು ಕೇಳಿದ್ದು ಬಸವಣ್ಣವರೇ ಮೈದಡವಿ ಸಾಂತ್ವನ ಹೇಳಿದ್ದು ಈ ಮೇಲಿನ ಅಂಶಗಳಿಗೆ ಸಾಕ್ಷಿಯಾದವು.

ನಾಗಯ್ಯ ನಡೆದ ಘಟನೆಯನ್ನು ಕೇರಿಯಲ್ಲಿ ತಿಳಿಸಿದ. ಕೇರಿಯಲ್ಲಿ ದ್ದವರಿಗೆಲ್ಲ ಅಚ್ಚರಿಯಾಯಿತು. ಕೆಲವರು ಅಪಶಕುನ ಮುನ್ಸೂಚನೆ ಎಂದು ತಿಳಿದರು. ಈಗಿರುವ ವ್ಯವಸ್ಥೆ ತಾವು ಅಸ್ಪೃಶ್ಯರಾಗಿ ಹುಟ್ಟಿದ್ದು ಇವೆಲ್ಲ ಅವರ ಪೂರ್ವ ಜನ್ಮದ ಕರ್ಮ ಎಂದು ತಿಳಿದಿದ್ದರು. ದೈವ ನಿಯಮಿಸಿದ್ದನ್ನು ಮೀರಿ ನಡೆಯುವದು ತಪ್ಪು ಇದರಿಂದ ದೈವಗಳು ಮುನಿಯುತ್ತವೆ ಎಂಬುದು ಕೆಲವರ ವಾದವಾಗಿತ್ತು.

ನಾಗಯ್ಯ ಸಮಯ ಸಿಕ್ಕಾಗ ಬಸವಣ್ಣನವರಿಂದ ಕೆಲವು ಸಂಶಯ ಗಳನ್ನು ನಿವಾರಣೆ ಮಾಡಿಕೊಳ್ಳುತ್ತಿದ್ದ. ಅಣ್ಣನವರು ಸಮಾಧಾನದಿಂದ ನಿವಾರಣೆ ಮಾಡುತ್ತಿದ್ದರು.

''ದೇವರು ಎಲ್ಲ ಕಡೆ ಇದ್ದಾನೆ ಅಂದ ಮೇಲೆ ನಿಮ್ಮಲ್ಲಿ ಇರುತ್ತಾನೆ. ದೇವರ ಸೃಷ್ಟಿಯಲ್ಲಿ ಮೇಲು ಕೀಳು ಎಂಬ ಬೇಧ ಭಾವವಿಲ್ಲ. ವಿಧಿ ಕರ್ಮವೆಂಬುದು ಕಟ್ಟುಕಥೆ ಕುಲಜಾತಿ ಮಾನವ ನಿರ್ಮಿತ ಹೊರತು ದೇವ ನಿರ್ಮಿತವಲ್ಲ. ನಿಮ್ಮೊಳಗೆ ದೇವರಿದ್ದಾನೆ.

''ನಿಮ್ಮ ಕಾಲೇ ಕಂಭ
ದೇಹವೇ ದೇಗುಲ
ಶಿರವೇ ಹೊನ್ನಿನ ಕಳಸ''

ನೀವೆಲ್ಲ ನಡೆದಾಡುವ ದೇವರಾಗುತ್ತೀರಿ ಎಂದು ಹೇಳಿದರು. ಅಣ್ಣಾ ನಮ್ಮೊಳಗಿನ ದೇವರು ನಮಗೇಕೆ ಕಾಣುವದಿಲ್ಲ. ಎಂಬ ನಾಗನ ಪ್ರಶ್ನೆಗೆ ಬಸವಣ್ಣನವರು ''ನಿನ್ನ ಮುಖ ನಿನಗೆ ಕಾಣ ಬೇಕಾದರೆ ಕನ್ನಡಿ ಎಂಬ ಸಾಧನದ ಅಗತ್ಯವಿರುವಂತೆ ನಿಮ್ಮೊಳಗಿನ ದೇವರನ್ನು ಕಾಣಲು ಇಷ್ಟಲಿಂಗ ಎಂದು ಹೇಳುತ್ತ ಕೊರಳಲ್ಲಿರುವ ಇಷ್ಟಲಿಂಗವನ್ನು ಹೊರತೆಗೆದು ತೋರಿಸಿದರು. ಅವರ ಕೈಯಲ್ಲಿರುವ ಕಂಗೊಳಿಸುವ ಲಿಂಗವನ್ನು ಕಂಡು ಉದ್ವೇಗಗೊಂಡು ತಾನು ಲಿಂಗಧರಿಸಿ ಚನ್ನಬಸವಣ್ಣನಿಂದ ಪೂಜಾ ವಿಧಿ ವಿಧಾನ ಕೇಳಿಕೊಂಡು ''ಲಿಂಗ ಧರಿಸಿದವರೆಲ್ಲ ನನ್ನ ಪಾಲಿಗೆ ಸಂಗಮ ದೇವರೇ ಸರಿ'' ಎಂಬ ವಿಚಾರಕ್ಕೆ ಅರ್ಹನಾದನು. ಹೀಗೆ ಕಂಬಳಿ ನಾಗಯ್ಯನಾದ ಲಿಂಗಧಾರಿಯಾಗಿ ಶಿವನಾಗಯ್ಯನಾದ. ಈತ ಕಲ್ಯಾಣ ಬೀದಿಯಲ್ಲಿ ಕೋಳಿ ಕೂಗುವ ಮುನ್ನ ಎದ್ದು ಸ್ನಾನ ಮಾಡಿ ಲಿಂಗಪೂಜೆ ಪೂರೈಸಿ ನಿತ್ಯ ತನ್ನ ಕಾಯಕದಲ್ಲಿ ತೊಡಗುವದರೊಂದಿಗೆ ಹೊಸ ಆತ್ಮ ವಿಶ್ವಾಸದಿಂದ ಮೇಲೆದ್ದ ಶಿವನಾಗಯ್ಯ ಕಲ್ಯಾಣ ಬೀದಿಯಲ್ಲಿ ತಲೆಯತ್ತಿ ತಿರುಗಾಡುವಂತಾಯಿತು.

### 10. ಬಸವಣ್ಣನವರು ಸ್ಥಾಪಿಸಿದ 'ಅನುಭವ ಮಂಟಪ :

ಜಟಲಿವಾದ ಧಾರ್ಮಿಕ ಸಮಸ್ಯೆಗಳನ್ನು ಅಲ್ಲಮ ಪ್ರಭುಗಳ ಅಧ್ಯಕ್ಷತೆಯಲ್ಲಿ ಜರುಗುತ್ತಿದೆ. ವಿಚಾರ ಗೋಷ್ಠಿಗಳಲ್ಲಿ ಚರ್ಚಿಸಲಾಗು ತ್ತಿತ್ತು. ಈ ವಿಚಾರ ಗೋಷ್ಠಿಗಳು ನಡೆಯುತ್ತಿದ್ದ ಸ್ಥಳವೇ ಅನುಭವ ಮಂಟಪ.



ಈ ವಿಚಾರ ಗೋಷ್ಠಿ ಅಧ್ಯಕ್ಷ ಪೀಠಕ್ಕೆ ''ಶೂನ್ಯ ಸಿಂಹಾಸನ'' ಎಂದು ಕರೆದರು. ಪರಿಪೂರ್ಣ ಎನಿಸಿಕೊಂಡ ಮಹಾನ್ ಸಾಧಕ ಏರಲು ಅರ್ಹವಾದ ದೇವಪೀಠ ಅದಾಗಿತ್ತು. ಅದನ್ನು ಏರಲು ಸಮರ್ಥರಾಗಿದ್ದವರು ಅಲ್ಲಮ ಪ್ರಭುಗಳು. ಅವರನ್ನು ಪ್ರಭುದೇವ ಎಂತಲೂ ಕರೆಯುತ್ತಿದ್ದರು. ಪ್ರಭುದೇವರು ಸಹ ''ಗುಹೇಶ್ವರ'' ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸುತ್ತಿದ್ದರು. ಇವರು ಆ ದಿವ್ಯ ಸಿಂಹಾಸನದಲ್ಲಿ ಕುಳಿತು ವಿಚಾರಗೋಷ್ಠಿ ನಡೆಸುತ್ತಿದ್ದರು. ಈ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನವೇ ಅಂತಿಮ ತೀರ್ಮಾನವಾಗುತ್ತಿತ್ತು.

ಬಸವಣ್ಣನವರ ಬೋಧನೆಗಳನ್ನು ಮೂಲೆ ಮೂಲೆಗೂ ಹರಡುತ್ತಿದ್ದವರು ಜಂಗಮರು. ಈ ಜಂಗಮರಿಗೆ ಗುರುವಾಗಿದ್ದವರು ಬಸವಣ್ಣನವರು. ಬಸವಣ್ಣನವರಿಗೆ ಅಲ್ಲಮ ಪ್ರಭುಗಳು ಆಧ್ಯಾತ್ಮಿಕ ಗುರುಗಳಾಗಿದ್ದರು.

ಅನುಭವ ಮಂಟಪದಲ್ಲಿ ಬರೀ ವರ್ಣ ವ್ಯವಸ್ಥೆಯ ಚರ್ಚೆ ನಡೆಯುತ್ತದೆ ಎಂದು ಭಾವಿಸಕೂಡದು. ಶರಣ ಸಿದ್ಧಾಂತದ ಗುರು, ಲಿಂಗ, ಜಂಗಮ, ಕಾಯಕ, ದಾಸೋಹ, ಸ್ತ್ರೀ ಸಮಾನತೆ, ಸ್ಥಾವರ, ಜಂಗಮ, ಕುಟುಂಬದ ವ್ಯವಸ್ಥೆ ಇವೆಲ್ಲವುಗಳ ಚರ್ಚೆಯಾಗಿ ಸಿದ್ಧಾಂತ ಗಳಾಗಿ ಹೊರಬರುತ್ತಿದ್ದವು. ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪ ಸಿದ್ಧಾಂತದ ಕಮ್ಮಟವಾಗಿತ್ತು. ಇಂತಹ ಉನ್ನತ ಸಭೆಗಳಲ್ಲಿ ಭಾಗವಹಿಸುತ್ತಿದ್ದ ಶರಣರೆಂದರೆ ಸೊನ್ನಲಿಗೆ ಸಿದ್ಧರಾಮ, ಮಡಿವಾಳ ಮಾಚಯ್ಯ, ಡೋಹರ ಕಕ್ಕಯ್ಯ. ಮೋಳಿಗೆಯ ಮಾರಯ್ಯ. ಅಂಬಿಗರ ಚೌಡಯ್ಯ ಕಂಬಳಿ ನಾಗಯ್ಯ, ಬಡಗಿ ಬಸವಪ್ಪ ಅಳಿಯ ಚನ್ನಬಸ ವಣ್ಣ, ಮೇದಾರ ಕೇತಯ್ಯ, ಬಹುರೂಪಿ ಚೌಡಯ್ಯ ತುರುಗಾಹಿ ರಾಮಣ್ಣ ಇವರಲ್ಲದೇ ಶರಣೆಯರಾದ ಲಕ್ಕಮ್ಮ, ರಾಣಿ ಮಹಾದೇವಿ,

ಅಕ್ಕಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ನಾಗಮ್ಮ, ರೆಮ್ಮವ್ವ ಕಾಳೆವ್ವ, ಸತ್ಯಕ್ಕ ಮುಂತಾಗಿ ಅನೇಕ ಮಹಿಳೆಯರಿದ್ದರು.

''ಅನುಭವ ಮಂಟಪ'' ಇದೊಂದು ಸಂಸತ್ತು ಇಲ್ಲಿ ಎಲ್ಲರ ಉದ್ದೇಶ ಒಂದೇ ಸ್ವೇಚ್ಛಾ ಸುಂದರ ವ್ಯಕ್ತಿತ್ವ ನಿರ್ಮಾಣ, ದೋಷ ರಹಿತ ಸರ್ವ ಸಮಾನತೆಯುಳ್ಳ ಸಮಾಜ ನಿರ್ಮಾಣವಾಗಿದೆ.

ಅನುಭವ ಮಂಟಪದಲ್ಲಿ ಕುಲದಿಂದಾಗಲೀ ಅಧಿಕಾರದಿಂದಾಗಲೀ ಐಶ್ವರ್ಯದಿಂದಾಗಲೀ ವಯಸ್ಸಿನಿಂದಾಗಲೀ ಎಂಬ ಭೇದ ಭಾವವಿರಲಿಲ್ಲ ಎಲ್ಲರೂ ಸಮಾನರು ಎಂಬುವದಿತ್ತು. ಭಂಡಾರಿ ಬಸವಣ್ಣನಿಗೆ ಎಷ್ಟು ಪ್ರಾಮುಖ್ಯತೆಯಿದೆ ಕಸ ಗೂಡಿಸುವ ಸತ್ಯಕ್ಕನಿಗೂ ಅದೇ ಪ್ರಾಮುಖ್ಯತೆ ಸ್ಥಾನವಿರುತ್ತಿತ್ತು.

ಅನುಭವ ಮಂಟಪವು ಸಮತಾವಾದದ ತಳಹದಿಯ ಮೇಲೆ ಹೊಸ ಸಮಾಜವನ್ನೇ ರೂಪಿಸಿತು. ಅನುಭವ ಮಂಟಪದ ಸದಸ್ಯರೆಲ್ಲ ನೀಡುವವರು, ಬೇಡುವವರಲ್ಲ, ಆಲಸಿಗಳಲ್ಲಿ ಕಾಯಕ ಯೋಗಿಗಳು ತಮ್ಮ ಜೀವನದ ಅವಶ್ಯಕತೆಗಳನ್ನು ಅನ್ನ, ಅರಿವೆ, ವಸತಿ, ವಿದ್ಯೆ, ಔಷಧಿ, ಶಿವ ಪಂಚಾಯತಗಳನ್ನು ಪೂರೈಸುವ ವಿನಿಮಯ ಮಾಡಿಕೊಳ್ಳುವ ಆಧ್ಯಾತ್ಮಿಕ ಒಲವುಳ್ಳ ಶರಣರ ಸಮಾಜ ಸಕಲರಿಗೂ ಕಲ್ಯಾಣ ಬಯಸುವ ಸರ್ವೋದಯ ಸಮಾಜ. ಸಮಾನ ದೃಷ್ಟಿಯಿಂದ ಅಣುಲಕ್ಷಿಸಿ ಜೀವನದ ಎಲ್ಲ ಅಂಗಗಳ ಮೇಲೂ ತನ್ನ ಪ್ರಭಾವ ಮುದ್ರೆಯನ್ನು ಒತ್ತಿದ ಕೀರ್ತಿ ಅನುಭವ ಮಂಟಪಕ್ಕೆ ಸೇರುತ್ತದೆ.

ಅನುಭವ ಮಂಟಪವು ಸಜೀವ ಸಾಧಕರ ಒಂದು ಕ್ಷೇತ್ರ ವೀರಶೈವ ಅನುಭವಿಗಳು ಸತ್ಯದ ಕೇಂದ್ರವನ್ನೇ ಆಯ್ದುಕೊಂಡು ನೂತನ ವೀರಶೈವ ಧರ್ಮವನ್ನು ರೂಪಿಸಿದರು. ಅದರ ಮೂಲಕ ವಿಶ್ವ ಬಂಧುತ್ವ ತತ್ವವನ್ನು ಹೆಣೆದರು. ಇದು 12 ನೆಯ ಶತಮಾನದ



ಶರಣರ ಕೊಡುಗೆ ಸನ್ಯಾಸಿಗಳಿಗಷ್ಟೇ ಮೋಕ್ಷವು ಮೀಸಲಾಗಿರದೇ ಸಂಸಾರದಲ್ಲಿದ್ದುಕೊಂಡು ಶಿವಾನುಭವ ಪಡೆದು ಶೂನ್ಯ ತತ್ವವನ್ನು ಹೊಂದುವ ಹಾದಿಯನ್ನು ಅನುಭವ ಮಂಟಪವು ತೋರಿಸಿದೆ ಇದೇ ಮಹಾಕ್ರಾಂತಿ.

## 11. ಬಸವಣ್ಣನವರ ಕಾಯಕ ತತ್ವ :-

ಕಾಯಕದಿಂದ ಕಾಯಕ : ಕಾಯಕದಿಂದ ಕೈಲಾಸ : ಕಾಯಕವು ಕೇವಲ ಹೊಟ್ಟೆ ಪಾಡಿಗಾಗಿ ಮಾಡುವ ಉದ್ಯೋಗವಾಗಿರದೇ ಮನ ಭಾವಗಳು ಶುದ್ಧಗೊಳ್ಳುತ್ತವೆ. ತನು-ಮನ-ಭಾವ ಶುದ್ಧಿಗಳೇ ಸಂಸ್ಕರಣ. ಈ ಕಾರ್ಯದ ಸಾಧನ ಸಿದ್ಧಿಯೇ ಕಾಯಕ ಬಸವಾದಿ ಪ್ರಮಥರು ಕಾಣದ ಕೈಲಾಸವನ್ನು ಬಯಸಲಿಲ್ಲ. ಭೂ ಸ್ವರ್ಗವನ್ನು ನಿರ್ಮಿಸಿದರು. ಕಾಯಕವೇ ಕೈಲಾಸ ಎಂದು ನುಡಿದರು.

ಹಣ ಹುಟ್ಟುವದು ಕಾಯಕದಿಂದ ಅರ್ಥಾತ್ ಉದ್ಯೋಗದಿಂದ ಕಾಯಕವೆಂದರೆ ಉದ್ಯೋಗ ಪ್ರತಿಯೊಬ್ಬರೂ ಒಂದಿಲ್ಲೊಂದು ಉದ್ಯೋಗ ಮಾಡಬೇಕೆಂಬುದು ಶ್ರೀ ಬಸವಣ್ಣನವರ ನಿಯಮ. ಕಾಯಕ ಮಾಡದೇ ಅನ್ನಕ್ಕೆ (ಪ್ರಸಾದಕ್ಕೆ) ಅರ್ಹತೆಯಿಲ್ಲ, ಎಂಬುದು ಅವರ ಖಂಡಿತ ಮಾತು. ದುಡಿತವೇ ದುಡ್ಡಿನ ತಾಯಿ. ರಟ್ಟೆಯಿಂದ ದುಡಿದು ರೊಟ್ಟಿ ಪಡೆಯಬೇಕು. ಎನ್ನುವ ಮಾತುಗಳು ಕಾಯಕದ ಮಹತ್ವವನ್ನು ಎತ್ತಿ ತೋರಿಸುತ್ತವೆ.

ನಾವು ಮಾಡುವ ಕಾಯಕ ಪವಿತ್ರವಾಗಿರಬೇಕು. ಶರಣರು ಶುದ್ಧ ಮನಸ್ಸಿನಿಂದ ಕಾಯಕ ನಿರತರಾಗಬೇಕು. ಸಕಲರಿಗೂ ಕಾಯಕ ಅಗತ್ಯ.

''ಕ್ರಿಯೆಯಿಲ್ಲದ ಭಕ್ತ ಮನಜ
ಕ್ರಿಯೆಯಿಲ್ಲದ ಜಂಗಮ ರಾಕ್ಷಸ

ಕ್ರಿಯೆಯಿಲ್ಲದ ಪ್ರಸಾದಿ ಯವನ

ಕ್ರಿಯೆಯಿಲ್ಲದ ಶರಣ ಅಜ್ಞಾನಿ''

ಕ್ರಿಯೆಯಿಲ್ಲದ ಲಿಂಗೈಕ್ಯ ಜನನಕ್ಕೊಳಗು ನೋಡಾ ಕೂಡಲ ಸಂಗಮ ದೇವಾ''

ಕಾಯಕ ಸತ್ ಸ್ವರೂಪಿ ಮಂಗಲಮಯ ಅದು ಬಡತನ ನಿವಾರಣೆ ಮೂಲ ಚಿತ್ತ ಶುದ್ಧಿಯ ಸಾಧನ ಅರ್ಪಣಾ ಭಾವದ ಪ್ರತೀಕ ಎಂದಿದ್ದಾರೆ.

ಕಾಯಕವೇ ಜೀವನ, ಕಾಯಕವೇ ಕೈಲಾಸ ಕಾಯಕದಲ್ಲಿ ಮೇಲು ಕೀಳು ಇರುವದಿಲ್ಲ.

''ದೇವ ಸಹಿತ ಭಕ್ತ ಮನೆಗೆ ಬಂದರೆ

ನಿಮ್ಮ ಕಾಯಕವಾವುದೆಂದು ಬೆಸೆಗೊಂಡನಾದರೆ

ನಿಮ್ಮಾಣೆ ! ನಿಮ್ಮ ಪುರಾತನರಾಣೆ ! ತಲೆದಂಡ !

ತಲೆದಂಡ ! .... ಕೂಡಲ ಸಂಗಮದೇವ''

ಶಿವಭಕ್ತರೆಲ್ಲರೂ ಕುಲಜರು ಕಾಯಕಯೋಗಿಗಳು ಕಾಯಕವು ಪೂಜೆ ಕ್ರಿಯಾಶಕ್ತಿಯ ಉಪಾಸನೆ ಕಾಯಕದಲ್ಲಿ ಕ್ರಿಯೆಯುಂಟು ತನ್ನೀಲತೆಯುಂಟು. ಎಲ್ಲ ಯೋಗಗಳ ಸಂಗಮವೇ ನಿಜ ಕಾಯಕ. ಅದು ಇಹ ಪರಗಳ ಸೇತುವೆ. ಇಲ್ಲಿ ಶರಣರ ಕಾಯಕದಲ್ಲಿ ಆಧ್ಯಾತ್ಮಿಕ ದೃಷ್ಟಿ ಸ್ಪಷ್ಟವಾಗಿ ಗೋಚರಿಸುತ್ತದೆ.

ಕೇವಲ ಬೋಧನೆಯಲ್ಲಿ ಮಾನವತಾವಾದಿಯಾಗಿ, ಮೈಗಳ್ಳ ನಾಗಿ, ಪರಾವಲಂಬಿಯಾಗಿರುವದು ಮಾನವೀಯತೆಯ ಲಕ್ಷಣ ವಾಗಲಾರದು ಕೇವಲ ಅನುಕಂಪ ಸಹಾನುಭೂತಿ ಮಾತುಗಳು ಜನತೆಯ ಅಜ್ಞಾನ ದುಃಖ ದೂರಮಾಡಲಾರವು. ಆದ್ದರಿಂದ



ಬಸವಣ್ಣನವರು ಪ್ರತಿಯೊಬ್ಬನೂ ಒಂದಿಲ್ಲೊಂದು ಕಾಯಕ ಮಾಡಬೇಕೆಂದು ಹೇಳುತ್ತಾರೆ.

ಯಾವದೇ ಕಾಯಕ ಮಾಡದೇ ದಕ್ಷಿಣೆ ಪ್ರಸಾದ ನೈವೇದ್ಯ ರೂಪದಲ್ಲಿ ಕಸಿದುಕೊಳ್ಳುವ ಪುರೋಹಿತ ವರ್ಗದ ಮೌಢ್ಯವನ್ನು ತೊಡೆದು ಹಾಕಲು ಈ ಕಾಯಕ ತತ್ವ ಮಹತ್ವದ್ದಾಗಿದೆ. ಸ್ವಾವಲಂಬಿಯಾದ, ಮೇಲು ಕೀಳುಗಳಿಲ್ಲದ ಹೊಸ ಜೀವನಕ್ಕೆ ಇದು ನಾಂದಿ ಯಾಯಿತು. ಧರ್ಮ ಬೋಧಕನೂ, ಕೂಡಾ ಈ ತತ್ವಕ್ಕೆ ಹೊರತಾಗಿ ಇರಲಾರನು. ಬಸವಣ್ಣನವರು ಕಾಯಕವನ್ನು ಧಾರ್ಮಿಕ ಮತ್ತು ಆಧ್ಯಾತ್ಮಿಕ ನೆಲೆಯಿಂದ ನೋಡಿ ಅದಕ್ಕೆ ಜೀವನ ಮೌಲ್ಯವನ್ನು ಒದಗಿಸಿದ್ದಾರೆ.

ವ್ಯಕ್ತಿಯ ಮೋಕ್ಷದಲ್ಲಿ ಅವರಿಗೆ ಆಶೆಯಿರಲಿಲ್ಲ. ಸಾಮಾಜಿಕ ಪಿಡುಗನ್ನು ನಿವಾರಿಸುವದು ಅವರ ಗುರಿಯಾಗಿತ್ತು. ಆದ್ದರಿಂದಲೇ ಅವರು ಕಾಯಕವೇ ಕೈಲಾಸ ಎಂದು ಎಚ್ಚರಿಸಿದರು. ಯಾವದೇ ಕೆಲಸ ಸಣ್ಣದಿರಲಿ ದೊಡ್ಡದಿರಲಿ ಮಾಡುವಾಗ ಶ್ರದ್ಧೆಯಿರಬೇಕು. ಯಶಸ್ಸು ತೃಪ್ತಿಯನ್ನು ತಂದುಕೊಡುತ್ತದೆ. ತನ್ನ ಕೆಲಸ ತನಗೆ ತೃಪ್ತಿ ನೀಡಿದರೆ ಸಕಲರಿಗೂ ತೃಪ್ತಿ ನೀಡುತ್ತದೆ. ಕಾಯಕದಲ್ಲಿ ಶ್ರದ್ಧೆ ನಿಷ್ಠೆ ಇರದಿದ್ದರೆ ತೃಪ್ತಿ ಸಿಗುವದಿಲ್ಲ. ಅದರ ಬದಲು ಬೇಸರಿಕೆ ಉಂಟಾಗುತ್ತದೆ. ಅದಕ್ಕೆ ಬಸವಣ್ಣನವರು ''ಅಳೆಯುವವರು ಅಳೆಯುತ್ತ ಧನಿಯು ತ್ತಾರೆ. ಕೊಳಗವೇಕೆ ದನಿಯುವದಿಲ್ಲ ? ನಡೆಯುವವರು ನಡೆಯುತ್ತಾ ದನಿಯುತ್ತಾರೆ. ದಾರಿ ಏಕೆ ದನಿಯುವದಿಲ್ಲ ? ಅವರವರ ಮಾಟದಲ್ಲಿ ಶ್ರದ್ಧೆ ನಿಷ್ಠೆ ಭಕ್ತಿಯ ಅಭಾವವೇ ಕಾರಣ. ಭಕ್ತಿಯಿರದ ಕೆಲಸ ಕಷ್ಟಕ್ಕೆ ಮೂಲ ಆದರೆ ಕೊಳಗ ದಾರಿ ಜಡವಸ್ತುಗಳಿಗೆ ಪರೋಪಕಾರ ಬುದ್ಧಿಯಿದೆ ಬಡತನ, ಆಲಸಿತನ ಸಾಮಾಜಿಕ ಪಿಡುಗುಗಳೇ, ಬಡತನ ನಿರ್ಮೂಲನ ಮಾಡುವ ಶರಣರು ಕಾಯಕ ತತ್ವ ಅನುಷ್ಠಾನಕ್ಕೆ ತಂದರು.

ತಾನು ಕೈಕೊಂಡ ಕೆಲಸದಿಂದ ಬಂದ ಪ್ರತಿಫಲದಲ್ಲಿಯೇ ಸ್ವಲ್ಪ ಭಾಗ ಸಮಾಜಕ್ಕಾಗಿ ವಿನಿಯೋಗಿಸಬೇಕು. ಆಗ ಮಾತ್ರ ವೃತ್ತಿ ಕಾಯಕವಾಗಬಲ್ಲದು ಎಂದು ಹೇಳಿರುವರು. ಕಾಯಕ ಅಂದರೆ ವ್ಯಕ್ತಿ ತನಗಾಗಿ ಮತ್ತು ಸಮಾಜಕ್ಕಾಗಿ ಅರ್ಪಣಾ ಭಾವದಿಂದ ಕೈಕೊಳ್ಳುವ ಕಾರ್ಯ ಅದು ಧಾರ್ಮಿಕ ಕಾರ್ಯವಾಗಿರಬೇಕು. ವಿನಃ ನೀತಿ ಬಾಹಿರವಾಗಿರಬಾರದು ನಾಳಿನ ಬಾಳಿಗೆ ಸಂಗ್ರಹಿಸಿಡುವದು ಕಾಯಕದ ಉದ್ದೇಶವಾಗಿರಬಾರದು.

ಕಂಡವರನ್ನು ಬೇಡಿ ತರುವದು ಕಾಯಕವಲ್ಲ, ಬೇಡಿಕೊಂಡು ತಿನ್ನುವದು ಪರ ಪೀಡೆಯೇ ಹೊರತು ಕಾಯಕವಾಗಲಾರದು. ಹೀಗಾಗಿ ಸಹಸ್ರಾರು ಮಂದಿ ಅನುಯಾಯಿಗಳು ಬಸವಣ್ಣನವರು ಬೋಧಿಸಿದ ಕಾಯಕ ಮಾರ್ಗವನ್ನು ಅನುಸರಿಸತೊಡಗಿದರು.

## 12. ಅಸ್ಪೃಶ್ಯರ ಉದ್ಧಾರ ಕಾರ್ಯದಲ್ಲಿ ಬಸವಣ್ಣನವರು :-

ಅಸ್ಪೃಶ್ಯತೆಯನ್ನು ತೊಡೆದು ಹಾಕುವಲ್ಲಿ ಬಸವಣ್ಣನವರ ಮಾನವೀಯತೆ ಎದ್ದು ಕಾಣುತ್ತದೆ. ಅಸ್ಪೃಶ್ಯರು ಸಮಾಜದಲ್ಲಿ ತೀರಾ ಕೆಳಮಟ್ಟದ ಜನರಾದ ಹೊಲೆಯರು ಮಾದಿಗರಾಗಿರುತ್ತಾರೆ. ಅವರನ್ನು ಮುಟ್ಟಿಸಿಕೊಂಡರೆ ಮೈಲಿಗೆಯನ್ನು ಭಾವನೆ ಉತ್ತಮ ಕುಲದವರಲ್ಲಿ ಉಳಿದಿದೆ. ಭಾರತೀಯ ಸಮಾಜಕ್ಕೆ ಇದೊಂದು ದೊಡ್ಡ ಶಾಪ ವಾಗಿದೆ. ಒಂದು ಇನ್ನೊಂದಕ್ಕಿಂತ ಮೇಲು, ಕೀಳೆಂದೂ ಅದರಂತೆ ಆಚರಿಸುವದು ಪರಂಪರೆಯಿಂದ ಸಾಗಿಬಂದಿದೆ. ಇದು ಪವಿತ್ರ ಕ್ಷೇತ್ರ. ಇದು ಅಶುದ್ಧ ನೆಲ, ಇದು ಪವಿತ್ರ ತೀರ್ಥ ಇದು ಮೈಲಿಗೆ ನೀರು ಇವನು ಶ್ರೇಷ್ಠ ಜಾತಿಯವನು ಇವನು ಕೆಳಜಾತಿಯವನು ಹೀಗೆ ಜನರನ್ನು ವಿಂಗಡಿಸಿ ಮೌಲ್ಯಗಳನ್ನು ಕಟ್ಟಿ ಅದರಂತೆ ತಮ್ಮ ದೃಷ್ಟಿಕೋನ ಬೆಳೆಸುತ್ತಾ ಬಂದರು. ಇವೆಲ್ಲವುಗಳನ್ನು ಬಸವಣ್ಣನವರು



ಚೋದ್ಯದ ಸಂಗತಿ ಎಂದರು. "ನೆಲವೊಂದೆ" ಹೊಲಗೇರಿ ಶಿವಾಲಯ ಗಳಿಗೆ ಆಗಿರುವಾಗ, ಶೌಚಾಚಮನಕ್ಕೆ ಜಲವೊಂದೆ ಯಾಗಿರುವಾಗ ಜನಜನರ ನಡುವೆ ದೊಡ್ಡ ಕಂದಕವೇಕೆ ? ಎಂದು ಸಂಕಟಪಡುತ್ತಾರೆ. ಜಗವೆಲ್ಲ ಒಂದು ಮನೆ, ಕುಲವಾಗಿರುವಾಗ, ಕುಲ ಹಲವಾಗಿ ಛಿದ್ರ ಸಿದರೆ ಆ ಸೃಷ್ಟಿಕರ್ತನಿಗೆ ದ್ರೋಹ ಬಗೆದಂತೆ ಎಂದು ಹೇಳಿದರು.

ವೃತ್ತಿಗಳನ್ನು ಮೇಲು ಕೀಳು ಎಂದು ವಿಂಗಡಿಸುವದು ಮಹಾ ದ್ರೋಹ. ಒಂದು ಬುಡಕಟ್ಟಿನ ಜನ ಅನುಕೂಲಕ್ಕಾಗಿ ಪಶು ಸಂಗೋಪಣೆ, ಕುರಿಸಾಗಾಣಿಕೆ, ನೇಕಾರಿಕೆ, ಕಮ್ಮಾರಿಕೆ ಮುಂತಾದ ವೃತ್ತಿಗಳನ್ನು ಹಂಚಿಕೊಂಡು ಉತ್ಪಾದನಾ ಕಾರ್ಯದಲ್ಲಿ ಸಹಕಾರ ದಿಂದ ತೊಡಗುತ್ತಿದ್ದರು. ತನಗೆ ವಶವಾದ ಕಸಬನ್ನು ತಂದೆ ಮಗನಿಗೆ ಅನುವಂಶೀಯವಾಗಿ ಬಂದು ಒಂದು ಜಾತಿಗೆ ಸೀಮಿತವಾಯಿತು. ಇದನ್ನೇ ಬಸವಣ್ಣನವರು

"ಕಾಸಿ ಕಮ್ಮಾರನಾದ ; ಬೀಸಿ ಮಡಿವಾಳನಾದ
ಹಸೆನಿಕ್ಕಿ ಸಾಲಿಗನಾದ : ವೇದವನೋದಿ ಹಾರುವನಾದ"

ಕಸಬು ಜಾತಿಯಾಗಿ ಪರಿವರ್ತನೆಯಾಯಿತು ಕಮ್ಮಾರಿಕೆಯಾಗಲೀ, ಚರ್ಮ ಹದಮಾಡುವದಾಗಲೀ, ಹೂಪತ್ರಿಗಳನ್ನು ಎತ್ತಿ ಕೊಂಡು ಬರುವದಾಗಲಿ ಪವಿತ್ರ ಕೆಲಸಗಳೆ, ಆಯಾ ಕಾಯಕದ ವರೆನಲ್ಲ ಒಂದು ಜಾತಿಯಂದು ಬಗೆಯುವದು ಸಲ್ಲದ ಮಾರ್ಗ ವೆಂದರು.

ಅಸ್ಪೃಶ್ಯರೆಂದೆನಿಸಿಕೊಂಡ ಹರಿಜನರ ಬಗ್ಗೆ ಬಸವಣ್ಣನವರಿಗೆ ಅಪಾರ ಪ್ರೇಮವಿತ್ತು. ಅವರನ್ನು ಹೊಲೆಯರೆಂದು ಕರೆಯುವದನ್ನು ಅಲ್ಲಗಳೆದರು. ಅಸ್ಪೃಶ್ಯರೆಂದರೆ ಯಾರು ? ಬಸವಣ್ಣನವರ ವಾಕ್ಯವೇ ಬೇರೆಯಾಗಿತ್ತು.

"ಕೊಲುವನನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ!
ಕುಲವೇನೋ ಆವಂದಿರ ಕುಲವೇನೋ
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು"

ತಮ್ಮ ಆಲೋಚನೆಗಳಿಗನುಸಾರವಾಗಿ ಬಸವಣ್ಣನವರು ನಡೆದರು ಹಾಗೂ ನಡೆಯುವಂತೆ ಒತ್ತಾಯಿಸಿದರು. ಪರಂಪರೆಯಿಂದ ಆಚರಣೆಯಲ್ಲಿದ್ದ ಜಾತಿ ಪದ್ಧತಿಯನ್ನು ಮಡಿ ಮೈಲಿಗೆಗಳನ್ನು ಅಮಾನವೀಯವೆಂದು ಬಸವಣ್ಣನವರು ತೋರಿಸಿಕೊಟ್ಟರು. ಅಷ್ಟೇ ಅಲ್ಲ ಅಸ್ಪೃಶ್ಯರನ್ನು ತಮ್ಮ ಧರ್ಮದಲ್ಲಿ ಸೇರಿಸಿಕೊಂಡು ಅವರಿಗೆ ಧಾರ್ಮಿಕ ಸಾಮಾಜಿಕ ಸ್ವಾತಂತ್ರ್ಯ ನೀಡಿದರು. ಅವರಿಗೆ ವ್ಯಕ್ತಿ ಸ್ವಾತಂತ್ರ್ಯದ ಮಹತ್ವ ಕಲ್ಪನೆ ತಂದುಕೊಟ್ಟರು.

ಅಸ್ಪೃಶ್ಯರು ನಗರ ಅಥವಾ ಗ್ರಾಮಗಳ ಹೊರಗಿರುವದಿಲ್ಲ. ಅವುಗಳ ಒಳಗೆ ಇರುತ್ತಾರೆ, ಎಂಬುದನ್ನು ಅಂಬಿಗರ ಚೌಡಯ್ಯ ಹೇಳಿದ್ದಾನೆ. "ತನ್ನ ತಾಯಿಯನ್ನು ದೂಷಿಸುವ, ತನ್ನ ತಂದೆಯೊಡನೆ ಹೀನಾಯನವಾಗಿ ವರ್ತಿಸುವ, ಇನ್ನೊಬ್ಬ ಹೆಂಡತಿಯನ್ನು ಪ್ರೇಮಿಸುವ ಹಾಗೂ ರಸ್ತೆಗಳ ಮೇಲೆ ಮುಳ್ಳುಗಳನ್ನು ಎಸೆಯುವ ವ್ಯಕ್ತಿಯೇ ಅಸ್ಪೃಶ್ಯ" ಎಂಬುದು ಅವರ ಹೇಳಿಕೆಯಾಗಿರುತ್ತದೆ.

ಕಲ್ಯಾಣ ನಗರದಲ್ಲಿ ಹರಿಜನರು ವೀರಶೈವರಾದರು. ಬಸವಣ್ಣ ಇವರ ಕೇರಿಯನ್ನು "ಹಿರಿಯ ಮಾಹೇಶ್ವರ ಕೇರಿ ಎಂದು ಕರೆದನು. ಅಲ್ಲಿಗೆ ಆಗಾಗ ಭೇಟಿ ಕೊಡುವ ಅಭ್ಯಾಸವನ್ನಿಟ್ಟುಕೊಂಡಿದ್ದರು. ಶಿವನಾಗಯ್ಯ ಮಹಾಶಿವಭಕ್ತ ಅವನ ಮನೆಗೆ ಬಸವಣ್ಣನವರು ಹೋಗಿ ದೇವರ ಪೂಜೆಯಲ್ಲಿ ಭಾಗವಹಿಸಿ ಹಾಗೂ ಪ್ರಸಾದ ಸ್ವೀಕರಿಸಿದರು.



ಬಸವಣ್ಣನವರು ಆಡಿದಂತೆ ಮಾಡಿ ತೋರಿಸಿದರು. ಸಹಸ್ರಾರು ವರ್ಷಗಳಿಂದ ಭಾರತದಲ್ಲಿದ್ದು ಅಸ್ಪೃಶ್ಯತೆಯನ್ನು ಬಸವಣ್ಣನವರು ಗುರುತಿಸಿದರು. ಅದರ ಘೋರ ಪರಿಣಾಮವನ್ನು ಮನಗಂಡು ಅದರ ನಿರ್ಮೂಲನಕ್ಕೆ ಅವಿರತವಾಗಿ ಹೋರಾಡಿದರು. ಅಸ್ಪೃಶ್ಯತೆ ತೊಲಗಿದರೆ ಜಾತೀಯತೆ ನೆಲಕಚ್ಚುತ್ತದೆ. ಜಾತೀಯತೆ ನಿರ್ನಾಮವಾದರೆ ಸಾಮಾಜಿಕ ನ್ಯಾಯ ದೊರೆಯುತ್ತದೆ, ಎಂಬುದು ಬಸವಣ್ಣನವರ ಧೋರಣೆಯಾಗಿತ್ತು.

### *13. "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಕುರಿತು ಬಸವಣ್ಣನವರ ವಿಚಾರ :-*

"ದೇವಾಲಯವು ಸ್ಥಾವರವಾಗಿದ್ದರಿಂದ ಇದು ಜಡತೆಯನ್ನೂ, ಅಳಿವನ್ನೂ ಸೂಚಿಸುತ್ತದೆ : ಆದರೆ ಜಂಗಮವೆಂಬ ದೇಹ ಚಲಿಸುವ ದೇವಾಲಯ ಅದು ಚೈತನ್ಯವನ್ನು ಬೆಳವಣಿಗೆಯನ್ನು ಸೂಚಿಸುತ್ತದೆ. ಆದ್ದರಿಂದ ನಿಮ್ಮ ದೇಹವನ್ನೇ ದೇವಾಲಯ ಮಾಡಿಕೊಳ್ಳಿರಿ ಎಂದಿದ್ದಾರೆ ಬಸವಣ್ಣನವರು.

ಲಿಂಗವನ್ನು ಧರಿಸಿದವರೇ ಲಿಂಗಾಯತ ; ಅವನೇ ವೀರಶೈವ, ಅವನ ದೇಹವೇ ದೇಗುಲ, ಆದ್ದರಿಂದ ; ವೀರಶೈವನಾದವನು ಲಿಂಗಾರ್ಚನೆ ನಿಮಿತ್ತ ಯಾವದೇ ದೇವಾಲಯಕ್ಕೆ ಹೋಗಬಾರದು ಎಂಬ ಕಟ್ಟಳೆಯನ್ನು ಬಸವಣ್ಣನವರು ವಿಧಿಸಿದರು.

ಬಸವಣ್ಣನವರ ದೃಷ್ಟಿಯಲ್ಲಿ ದೇವಾಲಯವೆಂಬುದು ಶ್ರೀಮಂತರೂ ಮತಾಂಧರೂ ಆದ ವ್ಯಕ್ತಿಗಳ ಸಾಂಸ್ಥಿಕತೆಯನ್ನು ಪ್ರತಿನಿಧಿಸಿತ್ತು. ಯಾವನೇ ವೀರಶೈವ ದೇವಾಲಯವನ್ನು ಕಟ್ಟಿಸಬೇಕಾಗಿಲ್ಲವೆಂದೂ ಹೇಳಿದರು. ಪರಮಾತ್ಮನು ಇಷ್ಟ ಲಿಂಗದ ರೂಪದಲ್ಲಿ

ಯಾವಾಗಲೂ ವ್ಯಕ್ತಿಯ ದೇಹದಲ್ಲಿಯೇ ಇರುತ್ತಾನೆ. ತನ್ನ ನಿಜ ರೂಪದಲ್ಲಿ ಭಕ್ತನ ಹೃದಯದಲ್ಲಿ ನೆಲೆಸಿರುತ್ತಾನೆ.

ಉಳ್ಳವರು ಶಿವಾಲಯವ ಮಾಡುವರು
ನಾನೇನು ಮಾಡಲಿ ಬಡವನಯ್ಯಾ
ಎನ್ನ ಕಾಲೇ ಕಂಭ ದೇಹವೇ ದೇಗುಲ,
ಶಿರವೇ ಹೊನ್ನಿನ ಕಳಸವಯ್ಯ,
ಕೂಡಲ ಸಂಗಮದೇವ, ಕೇಳಯ್ಯಾ !
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ !

ಬಸವಣ್ಣನವರು ಕೈಕೊಂಡ ಸತತ ಪ್ರಯತ್ನದ ಫಲವಾಗಿ ಸ್ಥಾವರ ಲಿಂಗಕ್ಕಿಂತ ಮಿಗಿಲಾದದ್ದು ಜಂಗಮ ಲಿಂಗ. ಈ ಜಂಗಮ ಲಿಂಗಕ್ಕೆ ದಿನಕ್ಕೆ ಎರಡು ಬಾರಿ ಪೂಜಿಸುವ ಪದ್ಧತಿ ರೂಢಿಗೆ ಬಂದಿತು. ಸಾಕಾರ ಶಿವನಿಗೆ ಇಲ್ಲಿ ಸ್ಥಾನವಿರಲಿಲ್ಲ.

ಇಲ್ಲಿ ಜಂಗಮವೆಂದರೆ ಶಿವಚೈತನ್ಯ ಅರಿವು ಆತ್ಮ ಎಂದು ಅರ್ಥೈಸಬೇಕು.

ಮೊದಲು ದೇವಾಲಯಗಳು ಗುಡಿ-ಗುಂಡಾರಗಳು ಶ್ರೀಮಂತರಿಗೆ ಮೀಸಲಾಗಿದ್ದವು. ಅಸ್ಪೃಶ್ಯರನ್ನು ದೇವಾಲಯದೊಳಕ್ಕೆ ಬಿಡುತ್ತಿರಲಿಲ್ಲ. ಒತ್ತಾಯ ಪೂರ್ವಕವಾಗಿ ದೇವಾಲಯ ದರ್ಶನ ಮಾಡುವ ಧೈರ್ಯವಾಗಲೀ ಸಾಮಾಜಿಕ ಬೆಂಬಲವಾಗಲೀ ಅವರಿಗಿರಲಿಲ್ಲ. ಒಂದು ಪಕ್ಷ ಹಾಗೆ ಮಾಡಿದರೆ ಶಿಕ್ಷೆಗೆ ಗುರಿಯಾಗುತ್ತಿದ್ದರು.

ಅದಕ್ಕೆ ಬಸವಣ್ಣನವರು ''ದೇವರು ಸರ್ವಾಂತರ್ಯಾಮಿ ಆ ದೇವರು ಎಲ್ಲರಲ್ಲಿದ್ದಾನೆ. ಪರಮಾತ್ಮನ ನೆಲೆ ಆತ್ಮದಲ್ಲಿ ಹೀಗಿರುವಾಗ ಸಾಂಕೇತಿಕ ಸ್ವರೂಪದ ಇಷ್ಟ ಲಿಂಗವನ್ನು ಧರಿಸಿ ದೇಹವೇ ದೇಗುಲವೆಂದು ಏಕೆ ಭಾವಿಸಬಾರದು ? ಎಂದು ತೀರ್ಮಾನಿಸಿದರು.



ಈ ಮೊದಲು ರಾಜಾ ಪ್ರತ್ಯಕ್ಷ ದೇವತಾ ಎಂಬ ನಂಬಿಕೆಯಿತ್ತು, ಮುಂದೆ ರಾಜಸತ್ತೆ ಮತ್ತು ಪುರೋಹಿತ ಸತ್ತೆ ಪರಸ್ಪರ ಪೂರಕವಾಗಿ ಸಮಾಜ ನಿಯಂತ್ರಿಸುತ್ತಿದ್ದವು. ಹೆಣ್ಣು ತಿರಸ್ಕಾರಕ್ಕೆ ಪಾತ್ರಳಾಗಿದ್ದಳು. ಒಟ್ಟಿನಲ್ಲಿ ಧರ್ಮ ಸಂಪತ್ತು, ಶಿಕ್ಷಣ ಕೆಲವೇ ಜನರಿಗೆ ಸ್ಥಾವರವಾಗಿತ್ತು, ಬಸವಣ್ಣನವರು ಹಾಗೂ ಅವರ ಸಂಗಡಿಗರು ಸ್ಥಾವರವಾಗಿ ಕೊಳೆಯ ತೊಡಗಿದ್ದ ಧರ್ಮ, ಸಂಪತ್ತು ಶಿಕ್ಷಣವನ್ನು ಸಮಾಜ ಮುಖೀ ಮಾಡುವ ಮೂಲಕ ಜಂಗಮಗೊಳಿಸಿದರು. ಇಲ್ಲಿ ಜಂಗಮ ಅಂದರೆ ಚಲನಶೀಲವಾಗಿರುವದು. ಚಲನಶೀಲವಾಗಿರುವದರಲ್ಲಿ ಜೀವಂತಿಕೆ ಇರುತ್ತದೆ. ಸ್ವಚ್ಛತೆ ಶುಭ್ರತೆ ಇರುತ್ತದೆ. ಜಂಗಮ ತತ್ವ ಪ್ರಕೃತಿ ಸಹಜವೆಂಬುದನ್ನು ದಿನನಿತ್ಯ ಬೀಸುವ ಗಾಳಿ, ಬೆಳಗುವ ಸೂರ್ಯ ಚಂದ್ರಕ್ಕೆ ಹೋಲಿಸಿದ್ದಾರೆ. ಅದನ್ನೇ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ'' ಎನ್ನುವದು.

### *14. ದಯ ಮತ್ತು ಅನುಕಂಪ ಕುರಿತು ಬಸವಣ್ಣನವರ ವಿಚಾರಗಳು :-*

ಬಸವಣ್ಣನವರು ಅಪ್ಪಟ ಅಹಿಂಸಾವಾದಿಗಳಾಗಿದ್ದರು. ಯಾವದೇ ಜೀವಿಯನ್ನು ಯಾವದೇ ಕಾರಣಕ್ಕಾಗಿ ಹಿಂಸಿಸಬಾರದೆಂಬ ಮನೋಭಾವ ಅವರದಾಗಿತ್ತು.

ಜೀವ ದಯವಿಲ್ಲದ ಧರ್ಮವನ್ನು ಖಂಡಿಸಿ ವಚನಗಳಲ್ಲಿ ಈ ರೀತಿ ಹೇಳಿದ್ದಾರೆ.

''ಕಲ್ಲನಾಗರ ಕಂಡರೆ ಹಾಲನೆರೆಯೆಂಬರು
ದಿಟನಾಗರ ಕಂಡರೆ ಕೊಲ್ಲೆಂಬರು
ಉಂಬುವ ಜಂಗಮ ಬಂದರೆ ನಡೆಯೆಂಬರು
ಉಣ್ಣದಾ ಲಿಂಗಕ್ಕೆ ಬೋನವ ಹಿಡೆಯೆಂಬರು''

ಈ ಮಾತುಗಳಲ್ಲಿ ಬಸವಣ್ಣನವರ ಪ್ರಾಣಿ ದಯವನ್ನು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಜಂಗಮವೆಂದರೆ ಇಲ್ಲಿ ಯಾವದೇ ಒಬ್ಬ ವಿಶಿಷ್ಟ ವ್ಯಕ್ತಿಯಲ್ಲ. ಪ್ರಾಣಿ ಪಶುಪಕ್ಷಿ ಮೊದಲುಗೊಂಡು ಎಲ್ಲ ಜನರೂ ಜಂಗಮ ಸ್ವರೂಪ ಇವರನ್ನು ಕಾರುಣ್ಯದಿಂದ ಕಾಣುವದೇ ಧರ್ಮ.

ಬಸವಣ್ಣನವರಿಗೆ ಮನುಜರ ಸೇವೆಯಲ್ಲಿಯೇ ಮಹಾದೇವನ ಸೇವೆಯನ್ನು ಕಂಡುಂಡಷ್ಟು ತೃಪ್ತಿ ಸಿಗುತ್ತಿತ್ತು. ಕೇವಲ ಮನುಜರಷ್ಟೇ ಅಲ್ಲ ಸಕಲ ಜೀವಾತ್ಮಗಳ ನೋವನ್ನು ಕಂಡು ಮರಗುತ್ತಾರೆ ಕರಗುತ್ತಾರೆ.

''ದಯವಿಲ್ಲದ ಧರ್ಮವದ್ಯಾವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯಾ
ಕೂಡಲ ಸಂಗಯ್ಯನಂತಲ್ಲದೊಲ್ಲ ನಯ್ಯಾ''

ಜೀವಿಗಳ ಜೀವಿಸುವ ಹಕ್ಕನ್ನು ಕಸಿದುಕೊಳ್ಳಲು ಸಾಧ್ಯವಿಲ್ಲ ವೆಂದು ಹೇಳಿದ ಅವರು ಧರ್ಮ ಯಾವದೇ ಜೀವಿಯ ಹಿಂಸೆಯನ್ನು ಒಪ್ಪುವದಿಲ್ಲವೆಂದು ಪ್ರತಿಪಾದಿಸಿದರು. ದೇವರು ಹಿಂಸೆಯನ್ನು ಬಯಸುವದಿಲ್ಲ. ಎಲ್ಲ ಧರ್ಮಗಳ ಮೂಲ ಅಹಿಂಸೆ ದಯವೇ ಧರ್ಮದ ಮೂಲ ಎಂದು ಸಾರಿದರು.

ಸಮಾಜದಲ್ಲಿ ಎಲ್ಲ ಜನರೂ ನೈತಿಕ ತಳಹದಿಯ ಮೇಲೆ ಜೀವನ ನಡೆಸುವದು ಕೂಡಲ ಸಂಗಮದೇವರಿಗೆ ಪ್ರೀಯವಾಗುವ ದೆಂದರು. ಮನುಷ್ಯನ ನಡೆನುಡಿ ಶುದ್ಧವಾಗಿರಬೇಕೆಂದು ಈ ಕೆಳಗಿನ ವಚನದ ಮೂಲಕ ಹೇಳಿದ್ದಾರೆ.

''ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ



ತನ್ನ ಬಣ್ಣಿಸಬೇಡ ಇದಿರು ಅಳಿಯಲು ಬೇಡ
ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮನೊಲಿಸುವ ಪರಿ''

ಈ ವಚನದ ಮೂಲಕ ಮನುಷ್ಯನ ಅಂತರಂಗ ಬಹಿರಂಗ ಎರಡರಲ್ಲಿಯೂ ಶುದ್ಧವಾಗಿರಬೇಕೆಂದು ಹೇಳಿದ್ದಾರೆ. ಆಚಾರ, ವಿಚಾರ, ನಡೆ, ನುಡಿಗಳು ಶುದ್ಧವಾಗಿರಬೇಕಾದುದೆ ನೈತಿಕ ಜೀವನವೆಂದಿದ್ದಾರೆ. ''ಏನಿ ಬಂದಿರಿ ಹದುಳವಿದ್ದರೆ ಎಂದರೆ ನಿಮ್ಮ ವೈಸಿರಿ ಹಾರಿ ಹೋಗುವದೇ ? ಕುಳ್ಳಿರೆಂದರೆ ನೆಲ ಕುಸಿದು ಹೋಗುವದೇ ಒಡನೆ ನುಡಿದರೆ ಶಿರ ಹೊಟ್ಟೆಯೊಡೆಯುವದೇ ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ ಕೆಡವಿ ಮೂಗ ಕೊಯ್ಯದೇ ಮಾಣ್ಬನೆ ಕೂಡಲ ಸಂಗಮದೇವನು.

ದೇವಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ
ಕಾಣಿಬೋ ಸತ್ಯ ನುಡಿಯುವದೇ ದೇವಲೋಕ
ಮಿಥ್ಯದ ನುಡಿಯುವದೇ ಮರ್ತ್ಯ ಲೋಕ
ಆಚಾರವೇ ಸ್ವರ್ಗ ಅನಾಚಾರವೇ ನರಕ
ಕೂಡಲ ಸಂಗಮದೇವಾ ನೀವೆ ಪ್ರಮಾಣ''

ಮೊದಲನೆಯ ವಚನ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯನ್ನು ಹೇಗೆ ಕಾಣಬೇಕೆಂಬುದನ್ನು ಸೂಚಿಸುತ್ತದೆ. ಎರಡನೆಯ ವಚನ ಕೈಲಾಸ, ವೈಕುಂಠ ಸ್ವರ್ಗ ಮರ್ತ್ಯ ಲೋಕ ಬೇರಿಲ್ಲ ಅವುಗಳನ್ನು ಈ ಲೋಕ ದಲ್ಲಿಯೇ ಕಾಣುವ ಸಂಕಲ್ಪ ಮಾಡಬೇಕೆಂದು ಬಸವಣ್ಣನವರು ಹೇಳುತ್ತಾರೆ.

## 15. ಸ್ತ್ರೀ ಸಮಾನತೆ ತೋರಿದ ಬಸವಣ್ಣನವರು :-

ಸ್ತ್ರೀಯರು ಪ್ರಾಚೀನ ಕಾಲದಿಂದಲೂ ನಮ್ಮ ಸಮಾಜ ಕೀಳೆಂದು ಶೋಷಿಸುತ್ತಲೇ ಬಂದಿದೆ. ನಾಲ್ಕು ಗೋಡೆಗಳ ಮಧ್ಯದಲ್ಲಿ ಹೆಣ್ಣಿನ ಜಗತ್ತಾಗಿತ್ತು. ಅವಳು ಮಾನವೀಯತೆಯಿಂದ ವಂಚಿತಳಾಗಿದ್ದಳು. ಸಮಾಜದಲ್ಲಿ ಹೊಲೆಯರಿಗಿದ್ದ ಸ್ಥಾನವೇ ಸ್ತ್ರೀಯರದು ಆಗಿತ್ತು.

ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು ಹೀನ ಸ್ಥಿತಿಗೆ ಇಳಿದಿದ್ದನ್ನು ಕಂಡು ಮಮ್ಮಲ ಮರುಗಿದರು. ಸ್ತ್ರೀಯರ ಬಗ್ಗೆ ಸಮಾಜದಲ್ಲಿದ್ದ ಮೂಢನಂಬಿಕೆ, ತಪ್ಪು ಕಲ್ಪನೆಗಳನ್ನು ಬೇರು ಸಹಿತ ಕಿತ್ತು ಹಾಕಲು ಆಲೋಚಿಸಿದರು. ಹೆಣ್ಣು ಮಕ್ಕಳಿಗೆ ಎಲ್ಲಿಲ್ಲದ ಸ್ವಾತಂತ್ರ್ಯವನ್ನು ನೀಡಿ ಅವರ ಬೌದ್ಧಿಕ ವೈಚಾರಿಕ ಹಾಗೂ ಆಧ್ಯಾತ್ಮಿಕ ವಿಕಾಸಕ್ಕೆ ಕಾರಣರಾದರು. ಪುರುಷರಂತೆ ಸ್ತ್ರೀಯು ಹುಟ್ಟಿರುವ ಕಾರಣ ಆಕೆಯು ಶೂದ್ರಳಲ್ಲ ಧರ್ಮ ಸಂಸ್ಕಾರಕ್ಕೆ ಸ್ತ್ರೀಯು ಸಮಾನವಾಗಿಯೇ ಅರ್ಹಳು ಎಂದು ಹೇಳಿರುವಳು. ಸ್ತ್ರೀಯು ಶಾರೀರಿಕವಾಗಿ ದುರ್ಬಲಳಾದರೂ ಮಾನಸಿಕವಾಗಿ ದುರ್ಬಲಳಲ್ಲ ಎಂದು ತಿಳಿಸಿದರು.

ಮಾನವ ಸಮಾನತೆಯನ್ನು ತಮ್ಮ ಬದುಕಿನಲ್ಲಿ ಆಚರಿಸಿದ ಬಸವಾದಿ ಶರಣರು ಸ್ತ್ರೀಯರಿಗೆ ಸಮಾನತೆಯನ್ನಷ್ಟೇ ಕಲ್ಪಿಸಲಿಲ್ಲ. ''ಪರ ವಧುವ ಮಹಾದೇವಿ'' ಎಂದು ಹೇಳಿ ದೇವತಾ ಸ್ವರೂಪದಲ್ಲಿಯೂ ಸ್ತ್ರೀಯರನ್ನು ಕಂಡರು. ಅಕ್ಕ ನಾಗಮ್ಮ, ಅಕ್ಕ ಮಹಾದೇವಿ, ಮುಕ್ತಾಯಕ್ಕ ಈ ಹೆಸರುಗಳೊಂದಿಗೆ 'ಅಕ್ಕ' ಎಂಬ ಹಿರಿತನ ಸ್ತ್ರೀಯರಿಗೆ ದಕ್ಕಿದೆ. ಬಸವಣ್ಣನವರು ಪುರುಷರನ್ನು ಹೇಗೆ ಪೂಜ್ಯ ಭಾವದಿಂದ ಕಾಣುತ್ತಿದ್ದರೂ ಹಾಗೆ ಸ್ತ್ರೀಯರನ್ನು ಕಂಡರು. ಡೋಹರ ಕಕ್ಕಯ್ಯನನ್ನು ಹೇಗೆ ತನ್ನ ಬೊಪ್ಪನೆಂದು ಬಗೆದರೋ ಹಾಗೆಯೇ 'ಎಮ್ಮ ತಾಯಿ ನಿಂಬೆವ್ವ' ಎಂದು ತಿಳಿದರು.



''ಹೆಣ್ಣನ್ನು ತಾಯಿಯೆಂದೇ ನೋಡಬೇಕಲ್ಲದೇ ಬೇರೆ ಕಣ್ಣುಗಳಿಂದ ನೋಡಬಾರದು'' ಮಾತೆ ಎಂಬ ಭಾವ ತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲ ಸಂಗಮದೇವಾ, ಸ್ತ್ರೀ-ಪುರುಷರೆಂಬ ಭೇದವೇ ಆಧ್ಯಾತ್ಮಲೋಕದಲ್ಲಿ ಅರ್ಥಹೀನವಾದದ್ದು ವ್ಯತ್ಯಾಸ ಕಾಣುವದು ಶರೀರ ರಚನೆಯಲ್ಲಿ ಮಾತ್ರ, ಆತ್ಮನ ಅಸ್ತಿತ್ವದಲ್ಲಿ ಅಲ್ಲ. ದೇವರ ದಾಸಿಮಯ್ಯ ತನ್ನ ವಚನದಲ್ಲಿ

''ಮೊಲೆ ಮೂಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣು ಅಲ್ಲಾ
ಕಾಣಾ ರಾಮನಾಥ''

ಇದರ ಜೊತೆಗೆ ಹೆಣ್ಣು ಮಾಯೆ ಎಂಬ ಸಂಪ್ರದಾಯ ಕತೆಯನ್ನು ಕಿತ್ತು ಹಾಕಿದರು. 12 ನೆಯ ಶತಮಾನದ ವೇಳೆಗೆ ಬಹುಸಂಖ್ಯೆ ಶರಣೆಯರು ಸಂಸಾರಿಗಳಾಗಿದ್ದು ದಾಂಪತ್ಯ ಧರ್ಮವನ್ನು ಪಾಲಿಸುತ್ತಾ ಬಂದವರಾಗಿದ್ದರು. ''ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ'' ಎಂಬುದನ್ನು ಅಂದಿನ ಸ್ತ್ರೀ-ಪುರುಷರು ಅರಿತವರಾಗಿದ್ದರು.

ಅಂದಿನ ಮಹಿಳೆಯರು ಪತಿಯ ದಾರಿಯಲ್ಲಿ ಬಂದವರಲ್ಲದೇ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡು ಸ್ವತಂತ್ರ ದಾರಿಯಲ್ಲಿ ನಡೆದರು. ಕಾಯಕನಿಷ್ಠರೂ ಆಗಿ ತಮ್ಮ ಜೀವನ ಸಾಗಿಸಿದರು. ಅನೇಕ ಜನರ ಹೆಸರಿನ ಜೊತೆಗೆ ಕಾಯಕವೂ ಸೂಚಿತವಾಗಿದೆ. ಉದಾಹರಣೆಗೆ ಕನ್ನಡಿ ಕಾಯಕದ ರೇಣಮ್ಮ, ಕೊಟ್ಟಣದ ಸೋಮಮ್ಮ, ಕದಿರ ಕಾಯಕದ ಕಾಳವ್ವ ಈ ಕೆಲವು ಹೆಸರುಗಳು ಕಂಡು ಬರುತ್ತವೆ.

ಆಧ್ಯಾತ್ಮಿಕ ಅನುಭವದಲ್ಲಿ ಸ್ತ್ರೀ-ಪುರುಷರು ಎಂಬ ಭೇದ ಭಾವ ಇರಲಿಲ್ಲ. ಇದೊಂದು ವಿಚಾರ ಸ್ವಾತಂತ್ರ್ಯದ ಕಾಲ ಬಸವಣ್ಣನವರ

ಮಹಾಮನೆ ಅವಿಮುಕ್ತ ಕ್ಷೇತ್ರವಾಗಿತ್ತು. ನಾಗಲಾಂಬಿಕೆ, ನೀಲಾಂಬಿಕೆ, ಸತ್ಯಕ್ಕ, ಮುಕ್ತಾಯಕ್ಕ, ಅಕ್ಕಮಹಾದೇವಿ ಮೊದಲಾದ ಸ್ತ್ರೀಯರು ಶಿವಶರಣರಾಗಿದ್ದರು. ಸ್ತ್ರೀ ಮೋಕ್ಷಕ್ಕೆ ಅರ್ಹಳು ಎಂಬುದು ಅನುಭವ ಮಂಟಪದ ಘೋಷಣೆಯಾಯಿತು.

## 16. ಅಂತರ್‌ಜಾತಿ ವಿವಾಹ ಕಾರ್ಯದಲ್ಲಿ ಬಸವಣ್ಣನವರ ನಿಲವು :-

ಸಮಾಜದಲ್ಲಿನ ಜಾತಿಯತೆಯನ್ನು ತೊಡೆದು ಹಾಕಲು ಅಂತರ್ ಜಾತಿಯ ವಿವಾಹ ಅವಶ್ಯವೆಂದು ತಿಳಿದರು. ಇದನ್ನು ಅವರು ಬೋಧಿಸಲಿಲ್ಲ. ಆ ಮಾತಿಗೆ ಸಾಕ್ಷಿಯಾಗಿ ನಿಂತರು.

ಕ್ಷತ್ರಿಯ ಅಂಶದ ಸಿದ್ಧರಸನ ಮಗಳು ನೀಲಾಂಬಿಕೆಯನ್ನು ಬಸವಣ್ಣ ಮದುವೆಯಾದರು. ಮೇಲು ಜಾತಿಯ ಗಂಡು ಕೀಳು ಜಾತಿಯ ಹೆಣ್ಣಿನೊಂದಿಗೆ ವಿವಾಹವಾಗುವ ಪದ್ಧತಿಯನ್ನು ಬದುಕಿನ ಹೋರಾಟದ ಮೂಲಕವೇ ಪ್ರಾರಂಭಿಸಿದರು.

ಆಗಿನ ಕಾಲದಲ್ಲಿ ಉತ್ತಮ ಜಾತಿಯ ಗಂಡಸರು ಅಸ್ಪೃಶ್ಯರ ಮಹಿಳೆಯರನ್ನು ಹೊಲತಿಯರನ್ನು ಬಯಸುತ್ತಿದ್ದರು. ಸಂಭೋಗದ ವಸ್ತುಗಳನ್ನಾಗಿ ಬಳಸಿಕೊಳ್ಳುತ್ತಿದ್ದರು. ಆದರೆ ಅವರನ್ನು ವಿವಾಹವಾಗುತ್ತಿರಲಿಲ್ಲ. ಸಂಭೋಗದಲ್ಲಿ ಅಸ್ಪೃಶ್ಯತೆಯನ್ನು ಆಚರಿಸದೇ ವಿವಾಹದಲ್ಲಿ ಅಸ್ಪೃಶ್ಯತೆಯನ್ನು ಆಚರಿಸುತ್ತಿದ್ದರು. ಜಾತಿಕಟ್ಟು ಸಡಿಲಿಸಬೇಕಾದರೆ ಅಂತರ್‌ಜಾತಿ ವಿವಾಹ ಅವಶ್ಯವೆಂದು ಬಸವಣ್ಣನವರು ಬ್ರಾಹ್ಮಣನಾದ ಮಧುವರಸನ ಮಗಳನ್ನು ಸಮಗಾರ ಹರಳಯ್ಯನ ಮಗನಿಗೆ ಕೊಟ್ಟು ತಾವೇ ಸ್ವತಃ ನಿಂತು ವಿವಾಹ ಮಾಡಿಸಿದರು. ಅದು ಪ್ರತಿಲೋಮ ವಿವಾಹವೆಂದು ಸನಾತನಿಗಳು ಬೊಬ್ಬೆ ಇಟ್ಟರು. ಅನಂತರ ಬಿಜ್ಜಳನು ಜಾತಿವಾದಿಗಳ ಮಾತಿಗೆ ಮರುಳಾದನು. ಅದೇ ಕಲ್ಯಾಣ ಕ್ರಾಂತಿಗೆ ಕಾರಣವಾಯಿತು.



ಮಧುವಯ್ಯ ಹರಳಯ್ಯರಿಗೆ ಕಠಿಣ ಶಿಕ್ಷೆ ಕೊಟ್ಟರು ಶರಣರೆಲ್ಲಾ ದಿಕ್ಕಿಗೊಬ್ಬರು ಚೆಲ್ಲಾಪಿಲ್ಲಿಯಾದರು. ಇಷ್ಟಾದರೂ ಶರಣರು ತತ್ವನಿಷ್ಠೆ ಬಿಡಲಿಲ್ಲ. ಹಿಡಿದ ಸಿದ್ಧಾಂತವನ್ನು ಮರೆಯಲಿಲ್ಲ. ಕೊನೆಗೆ ಅವರು ಸಾವನ್ನಪ್ಪಿದರು ಹೊರತು ಸೋಲಲಿಲ್ಲ. 12 ನೆಯ ಶತಮಾನದಲ್ಲಿ ಕಾಯ್ದೆ ಕಾನೂನುಗಳ ಯಾವ ರಕ್ಷಣೆ ಇಲ್ಲದ ಸಂದರ್ಭದಲ್ಲಿ ಸಮಾಜದ ಸಮ್ಮುಖದಲ್ಲಿ ಅಂತರ್‌ಜಾತಿ ವಿವಾಹವಾಗಿದ್ದು ಭಾರತದ ಇತಿಹಾಸದಲ್ಲಿ ದಾಖಲಿಸುವಂಥಹದು. ಇದು ಚಿರಸ್ಮರಣೀಯವಾದ ಅದ್ಭುತ ಘಟನೆಯಾಗಿದೆ.

ಬಸವಣ್ಣನವರು **800** ವರ್ಷಗಳ ಹಿಂದೆ ಇಂಥ ಮಹತ್ ಕಾರ್ಯಗಳಿಗೆ ಕೈಹಾಕಿ ಪ್ರಯೋಗಿಸಿದ್ದು ಅವರ ಮಹಾ ಸಾಧನೆಯಾಗಿದೆ ಧಾರ್ಮಿಕ ಇತಿಹಾಸದಲ್ಲಿಯೇ ಒಂದು ಮೈಲುಗಲ್ಲು. ಎಂದು ಹೇಳಬಹುದು. ಊರಿಗೆ ಹೋಗುವ ದಾರಿಯನ್ನು ಯಾರು ತೋರಿದರೇನು ? ಊರಿಗೆ ಹೋಗುವದೇ ಮುಖ್ಯವಾಗಿದ್ದಲ್ಲಿ ದಾರಿ ತೋರಿಸಿದವರ ಜಾತಿ, ಕುಲ ಪಂಗಡ ಬಣ್ಣ ಕೇರಿ ಮುಖ್ಯವಲ್ಲ. ದಾರಿ ತೋರಿಸಿದವನು ಪ್ರಾಮಾಣಿಕನಾಗಿದ್ದರೆ ಸಾಕು.

ಅಸ್ಪೃಶ್ಯರ ಕುಲದಲ್ಲಿ ಹುಟ್ಟಿದ ; ಮದ್ದಳೆ ಬಾರಿಸುವ ಕಾಯಕದ ಅಲ್ಲಮ ಪ್ರಭು ಶಿವಾನುಭವ ಮಂಟಪದ ಅಧ್ಯಕ್ಷನಾಗಿ ಎಲ್ಲರಿಗೂ ಗುರುಸ್ಥಾನದಲ್ಲಿ ನಿಂತಿದ್ದು ಒಂದು ಐತಿಹಾಸಿಕ ರೂಪ ದಾಖಲೆಯಾಗಿದೆ.

ಗುರುಸ್ಥಾನ ಪಡೆಯಲು ಜಾತಿ, ಕುಲ, ಗೋತ್ರ ಮುಖ್ಯವಲ್ಲ, ಹುಟ್ಟು ಮುಖ್ಯವಲ್ಲ, ವ್ಯಕ್ತಿಯ ರೀತಿ, ನಡತೆ, ಚಾರಿತ್ರ್ಯ ಮುಖ್ಯವೆಂದು ಬಸವಣ್ಣನವರು ಬೋಧಿಸಿದರು. ಕಲ್ಯಾಣದಲ್ಲಿ ಶಿವಾನುಭವ ಮಂಟಪ ಸ್ಥಾಪನೆ ಬಸವಣ್ಣನವರು ಮಾಡಿದ ಮಹಾಕಾರ್ಯ, ಅದರ ಮಹಾದ್ವಾರವು ಎಲ್ಲರಿಗೂ ಸದಾ ತೆರದಿದ್ದಿತು. ಅಲ್ಲಿ ಕುಲಭೇದಗಳಿರ

ಲಿಲ್ಲ, ಲಿಂಗ ಭೇದವಿರಲಿಲ್ಲ, ವೃತ್ತಿ ಭೇದವಿರಲಿಲ್ಲ. ಸರ್ವರೂ ಸ್ವತಂತ್ರರೂ ಸಮಾನರೂ ಎಲ್ಲರಿಗೂ ಅಲ್ಲಿ ಸಮಾನ ಅವಕಾಶಗಳಿದ್ದವು.

ವೃತ್ತಿ ಅಸಮಾನತೆಯನ್ನು ಹೊಡೆದೋಡಿಸುವಂತೆ ದಾಸೋಹದ ಮೂಲಕ ಸಹಪಂಕ್ತಿ ಏರ್ಪಡಿಸಿ ಜಾತಿಯ ಅಸಮಾನತೆಯನ್ನು ತೊಡೆದು ಹಾಕಿದರು. ದಾಸೋಹ ಎಂಬುದು ವರ್ಗ ವರ್ಣ ರಹಿತವಾಗಿ ಸಮಾಜದಲ್ಲಿ ಮುಕ್ತವಾಗಿ ನಡೆಯುವ ವಿನಿಮಯ ಕ್ರಿಯೆಯಾಗಿದೆ. ಸಮಾಜಕ್ಕೆ ಸಲ್ಲಿಸುವ ಸೇವೆಯೇ ದಾಸೋಹ.

## *17. ಕಲ್ಯಾಣದ ಕ್ರಾಂತಿಯ ಕಿಡಿ :-*

ಶ್ರೀ ಬಸವೇಶ್ವರರ ಕೀರ್ತಿ ಆಕಾಶದ ತುತ್ತ ತುದಿಯನ್ನು ತಲುಪಿತ್ತು. ಪತಿತರು, ಕೀಳು ಕುಲದವರು ವೇಶ್ಯೆಯರು ಹೆಂಡ ಕುಡಿಯುವರು ದುಷ್ಕರ್ಮಿಗಳು ಲಿಂಗದೀಕ್ಷೆ ಪಡೆದು ಬಸವಣ್ಣನ ಮಹಾ ಮನೆಯಲ್ಲಿ ಶರಣ ಶರಣೆಯರಾಗಿ ಬೆಳಗಿದರು ಬಸವಣ್ಣ ಘನ ವ್ಯಕ್ತಿತ್ವವೇ ಇದಕ್ಕೆಲ್ಲ ಕಾರಣವಾಗಿತ್ತು.

ಉತ್ತಮ ಸಮಾಜದ ರಚನೆ ಬಸವಣ್ಣನವರ ಆದ್ಯ ಗುರಿಯಾಗಿತ್ತು. ಜನರ ನಡೆನುಡಿ ಉತ್ತಮವಾಗಿರಬೇಕೆಂಬುದು ಅವರ ನಿರೀಕ್ಷೆಯಾಗಿತ್ತು. 'ಅಯ್ಯಾ' ಎಂದಡೆ ಸ್ವರ್ಗ ಎಲವೋ ಎಂದಡೆ ನರಕ ; ಆದುದರಿಂದ ಹೃದಯದಲ್ಲಿ ಪ್ರೀತಿ ತುಂಬಿರಬೇಕು. ಮಾತಿನಲ್ಲಿ ನಯವಿರಬೇಕು. ಎಂದು ತಮ್ಮ ಅನುಯಾಯಿಗಳಿಗೆ ಮೇಲಿಂದ ಮೇಲೆ ಹೇಳುತ್ತಿದ್ದರು.

ಅಸ್ಪೃಶ್ಯರೆಂದಿನಿಸಿಕೊಂಡ ಹರಿಜನರ ಬಗ್ಗೆ ಬಸವಣ್ಣನವರಿಗೆ ಅಪಾರ ಪ್ರೇಮವಿತ್ತು. ಅವರನ್ನು ಹೊಲೆಯರೆಂದು ಕರೆಯುವದನ್ನು ಬಸವಣ್ಣನವರು ಅಲ್ಲಗಳೆದರು. ಅವರು ಊರ ಹೊರಗೆ ಇರುವದನ್ನು ವಿರೋಧಿಸಿದರು. ಅವರು ಮಾಡುವ ಉದ್ಯೋಗದ ಮೇಲೆ ಜಾತಿಗಳು ಉಂಟಾಗಿವೆ ಎಂಬ ಮಾತನ್ನು ಹೇಳುತ್ತಿದ್ದರು.



ಹರಿಜನರು ಕಲ್ಯಾಣ ನಗರದ ಹೊರವಲಯದಲ್ಲಿ ನೆಲಸಿದ್ದರೂ ಅವರಲ್ಲಿ ಅನೇಕರು ವೀರಶೈವರಾಗಿದ್ದರು. ಬಸವಣ್ಣನವರು ಅವರ ಕೇರಿಯನ್ನು ''ಹಿರಿಯ ಮಹೇಶ್ವರರ ಕೇರಿ''ಯೆಂದು ಕರೆದರು.

ಒಂದು ದಿನ ''ಹಿರಿಯ ಮಹೇಶ್ವರ ಕೇರಿ''ಯಲ್ಲಿ ನಾಗದೇವ ನೆಂಬ ಶಿವಭಕ್ತನಿದ್ದ ಅವನ ಮನೆಗೆ ಹೋಗಿ ಅವನೊಂದಿಗೆ ಕುಳಿತು ಭೋಜನ ಮಾಡಿದ ಪ್ರಸಂಗ ಬಂದಿತು.

ಬಸವಣ್ಣನವರು ರಾಜ್ಯದ ಬೊಕ್ಕಸವನ್ನು ದುರುಪಯೋಗ ಪಡಿಸಿಕೊಂಡಿದ್ದಾರೆಂಬುದು ಆಪಾದನೆಯಿದ್ದರೂ ಅದು ಸತ್ಯಕ್ಕೆ ದೂರವಾಗಿತ್ತು. ಆದರೆ ಬೊಕ್ಕಸದ ಹಣ ಇಮ್ಮಡಿಯಾಗಿದ್ದು ಬಿಜ್ಜಳನಿಗೆ ಸಂತೋಷವಾದರೂ ಆ ಹಣ ರಾಜನದಲ್ಲ ಪ್ರಜೆಗಳದ್ದು ಎಂಬ ಬಸವಣ್ಣನವರ ನಿಲುವು ಅವನಿಗೆ ಅಪಥ್ಯವಾಗಿತ್ತು.

ಪ್ರಜೆಗಳ ದುಡಿಮೆಯ ಹಣ ಪ್ರಜೆಗಳದೇ ವಿನಃ ಅದರ ಮೇಲೆ ರಾಜನ ಹಕ್ಕು ಸರ್ವಥಾ ಸಲ್ಲ. ಅದು ರಾಜ ಬಂಢಾರವೇ ವಿನಃ ರಾಜ ಬಂಢಾರವಲ್ಲ ಎನ್ನುವ ವಿಚಾರ ಇದು ರಾಜರಲ್ಲಿ ಮಾಂಡಲಿಕರಲ್ಲಿ ಅಸಹನೆ ಉಂಟಾಯಿತು.

ಬೊಕ್ಕಸದ ವಿಚಾರಣೆ ಹಾಗೂ ಶಿವನಾಗಯ್ಯನ ಮನೆಯಲ್ಲಿ ಪ್ರಸಾದ ಸ್ವೀಕರಿಸಿದ ಸಂದರ್ಭಗಳು ಬಸವಣ್ಣನವರಿಗೆ ಗೆಲವು ಸಾಧಿಸುವಂತಾದರೂ ಜನ್ಮದಿಂದ ಬ್ರಾಹ್ಮಣನಾದ ಮಧುವಯ್ಯಗಳ ಮಗಳ ಜೊತೆಗೆ ಸಮಗಾರ ಹರಳಯ್ಯನ ಮಗನ ಜೊತೆ ಮದುವೆ ಇದು ಮೇಲ್ವರ್ಗದವರಿಗೆ ನುಂಗಲಾರದ ತುತ್ತಾಯಿತು. ಈ ವಿಷಯ ಕುರಿತು ನ್ಯಾಯ ವಿಚಾರಣೆ ನಡೆಯಿತು. ವಿರೋಧಿ ಶಕ್ತಿಗಳೆಲ್ಲ ಒಂದಾದವು. ಬಿಜ್ಜಳನ ಮೇಲೆ ಒತ್ತಡ ತಂದವು.

ವಿಚಾರಣೆ ಸಂದರ್ಭದಲ್ಲಿ ಬಸವಣ್ಣನವರು ವಿವಾಹವನ್ನು ಸಮರ್ಥಿಸಿಕೊಂಡರೂ ಬಿಜ್ಜಳ ಬಸವಣ್ಣನವರಿಗೆ ಗಡಿಪಾರು ಶಿಕ್ಷೆ ವಿಧಿಸಿದ ಹರಳಯ್ಯ ಮಧುವರಸರಿಗೆ "ಎಳೆ ಹೂಡೆ ಶಿಕ್ಷೆ ವಿಧಿಸಿದ ಶಿಕ್ಷೆಯನ್ನು ಸಾರುತ್ತಿದ್ದಂತೆಯೇ ಕಲ್ಯಾಣದಲ್ಲಿ ಕ್ರಾಂತಿಯ ಕಿಡಿ ಹತ್ತಿತು. ಇತ್ತ ಕಲ್ಯಾಣದಲ್ಲಿ ಮಧುವರಸ ಹರಳಯ್ಯರ ಕಣ್ಣುಗಳನ್ನು ಕೀಳಿಸಲಾಯಿತು. ಬಸವಣ್ಣನವರಿಗೆ ಈ ಹಿಂಸೆ ಅಸಹನೀಯ ನೋವು ತಂದಿತು. ದೀರ್ಘವಾದ ನಿಟ್ಟುಸಿರು ಬಿಟ್ಟು ಕಲ್ಯಾಣವನ್ನು ತೊರೆದು ಕೂಡಲ ಸಂಗಮದತ್ತ ಸಾಗಿದರು.

ಇತ್ತ ಜಗದೇವನ ಮುಂದಾಳತ್ವದಲ್ಲಿ ಉದ್ರಿಕ್ತ ಶರಣರ ತಂಡ ಅರಮನೆಯತ್ತ ಧಾವಿಸಿತು. ಇವರನ್ನು ಸಮಾಧಾನ ಪಡಿಸಬೇಕೆಂದು ಬಿಜ್ಜಳ ತನ್ನ ಕೊಠಡಿಯಿಂದ ಹೊರ ಬಂದನು. ಸಂಜೆಗತ್ತಲು ಆವರಿಸಿತ್ತು. ಜಗದೇವ ಮೊಲ್ಲೆ ಮತ್ತು ಬಮ್ಮಾ ಎಂಬ ಶಿವಭಕ್ತರ ಜೊತೆಗೂಡಿ ಬಿಜ್ಜಳನ ಮೇಲೆ ಬಿದ್ದು ಅವನನ್ನು ಕತ್ತಿಯಿಂದ ಇರಿದ ಈ ಇರಿತಕ್ಕೆ ಬಿಜ್ಜಳನ ಪ್ರಾಣಪಕ್ಷಿ ಹಾರಿ ಹೋಯಿತು.

"ಶರಣರ ಕೊಲೆಗೆ ಬಿಜ್ಜಳನ ಕೊಲೆ" ಎಂಬ ಕೂಗು ಎಲ್ಲೆಲ್ಲೂ ಹರಡಿತು. ಅರಮನೆಯ ದ್ವೇಷ ಕಟ್ಟಿಕೊಂಡು ಶರಣರು ಕಲ್ಯಾಣದಲ್ಲಿರುವದು ಅಸಾಧ್ಯವೆನಿಸಿತು. "ಒಲೆಹತ್ತಿ ಉರಿದಡೆ ನಿಲ್ಲಬಹುದೇ ಧರೆ ಹತ್ತಿ ಉರಿದಡೆ ನಿಲ್ಲಬಹುದೇ ?" ಎಂಬುದಾಗಿ ಬಸವಣ್ಣರಾಡುತ್ತಿದ್ದ ಮಾತು ಶಿವಶರಣರ ನೆನಪಿಗೆ ಬಂದಿತು.

### *18. ಬಸವಣ್ಣನವರ ಕೊನೆಯ ದಿನಗಳು :-*

ಬಸವಣ್ಣನವರು ಕೂಡಲ ಸಂಗಮದತ್ತ ನಡೆಯುತ್ತಿದ್ದಂತೆ ಮಾರ್ಗಮಧ್ಯದಲ್ಲಿ ಅನೇಕ ಸುದ್ದಿಗಳು ಒಂದರ ನಂತರ ಒಂದು ಬರತೊಡಗಿದವು.



ಮಧುವರಸ ಹರಳಯ್ಯನವರಿಗೆ ಶಿಕ್ಷೆ, ಬಿಜ್ಜಳನ ಕೊಲೆ, ವಚನ ಕಟ್ಟುಗಳನ್ನು ಸುಡುವ ಸುದ್ದಿ, ಚನ್ನಬಸವಣ್ಣ ಕಲ್ಯಾಣ ತೊರೆದ ಸುದ್ದಿ ಒಂದರ ಮೇಲೊಂದು ಬಂದು ಕೇಳುತ್ತ ನಡೆದರು. ಇದರಿಂದ ಅಣ್ಣನವರ ಕಣ್ಣುಗಳು ಹನಿಗೂಡಿದವು. ಹಸಿವೆ ನಿದ್ದೆ ನೀರಡಿಕೆ ಎಲ್ಲವೂ ದೂರವಾದವು. ಮನಸ್ಸು ಭಾರವಾಯಿತು. ಮನಸ್ಸಿನ ನೋವನ್ನು ಯಾರೊಂದಿಗೆ ಹಂಚಿಕೊಳ್ಳಬೇಕು ಎಂಬುದು ಉಂಟಾಯಿತು.

ಈ ಹೊತ್ತಿಗೆ ಚನ್ನಬಸವಣ್ಣ, ಸಿದ್ಧರಾಮ, ಅಲ್ಲಮ ಪ್ರಭು ಕಲ್ಯಾಣದಲ್ಲಿ ಉಳಿದಿಲ್ಲವೆಂದು ತಿಳಿದು ಪತ್ನಿ ನೀಲಾಂಬಿಕೆ ನೆನಪಾಗಿ ಕರೆತರಲು ಅಪ್ಪಣ್ಣನನ್ನು ಕಳುಹಿಸಿದರು. ಆದರೆ ನೀಲಾಂಬಿಕೆ ಅಪ್ಪಣ್ಣನವರೇ ಸಂಗಯ್ಯನಲ್ಲಿ ಒಂದಾಗಲು ಕೂಡಲ ಸಂಗಮದತ್ತಲೇ ನಡೆಯಬೇಕೆ ? ಅಲ್ಲಿದ್ದ ಸಂಗಯ್ಯ ಇಲ್ಲಿಲ್ಲವೇ ? ಎಂದು ಹೇಳಿದಳು. ನೀಲಾಂಬಿಕೆಯ ಉತ್ತರದಿಂದ ಬಸವಣ್ಣನವರಿಗೆ ಕೋಪ ಬರದೇ ಗೌರವ ಇಮ್ಮಡಿಯಾಯಿತು.

ಬಸವಣ್ಣನವರು ಭಾವುಕರಾಗಿದ್ದು ತೀರಾ ಒಂಟಿಯಾದರು. ತಮಗಾದ ನೋವನ್ನು ತಮ್ಮೊಳಗೆ ನುಂಗಿದರು. ಉರಿಯಂತೆ ತಮ್ಮೊಳಗೆ ಬೇಯುತ್ತ ಕೂಡಲ ಸಂಗಮವನ್ನು ತಲುಪಿದರು.

ಈ ಸಲ ಬಸವಣ್ಣನವರು ದೇವಾಲಯದತ್ತ ಸಾಗದೇ ಈ ಮೊದಲು ಕುಳಿತುಕೊಂಡಿದ್ದ ಹಾಸುಗಲ್ಲಿನ ಮೇಲೆ ಕುಳಿತು ಹಿಂದಿನದೆಲ್ಲ ನೆನಪಿಸಿಕೊಂಡು ಇಂದು ನಾನು ನಾನೊಬ್ಬನೇ ನನ್ನ ಜೊತೆ ಈ ಹಾಸುಬಂಡೆ ಅಂದು ನನ್ನ ಮನ ತಳಮಳವನ್ನೆಲ್ಲ ತಿಳಿಗೊಳಿಸಿಕೊಂಡಿದ್ದು ಇಲ್ಲಿಯೇ ಇಂದು ನನಗಿದೆ ಆಸರೆ ಒಂದರ್ಥದಲ್ಲಿ ನನ್ನ ಬದುಕು ಪ್ರಾರಂಭಗೊಂಡಿದ್ದು ಇಲ್ಲಿಯೇ ಅದು ಇಲ್ಲಿಯೇ ಬಯಲಾಗಬೇಕು ಎಂದುಕೊಂಡರು.

ನದಿಯೊಳಗೆ ಇಳಿದು ಸ್ನಾನ ಮಾಡಿ ಹಾಸುಗಲ್ಲಿನ ಮೇಲೆ ಪದ್ಮಾಸನ ಹಾಕಿ ಭಸ್ಮಧಾರಿಗಳಾಗಿ ಲಿಂಗ ದೇವನನ್ನು ನೆನೆಯುತ್ತ ಇಷ್ಟ ಲಿಂಗವನ್ನು ಕರದಲ್ಲಿಟ್ಟುಕೊಂಡು ನಿತ್ಯದಂತೆ ಪೂಜೆ ಸಲ್ಲಿಸಿ ಧ್ಯಾನಸ್ಥರಾದರು. ತಂಗಾಳಿ ತೀಡುತ್ತಿತ್ತು, ನದಿ ಹರಿಯುತ್ತಿತ್ತು. ದೂರದಲ್ಲಿ ಸೂರ್ಯ ಉದಯಿಸುತ್ತಿದ್ದಂತೆ ಬಸವಣ್ಣನವರು ಬಯಲಿನೊಳಗೊಂದಾದರು. ಅಂತೂ ಸಂಗಮೇಶ್ವರನ ಸನ್ನಿಧಿ ಅವರಿಗೆ ಪ್ರಾಪ್ತವಾಯಿತು.

## 19. ಬಸವಣ್ಣನವರ ವ್ಯಕ್ತಿತ್ವ ಮತ್ತು ಪ್ರಭಾವ :-

ಒಬ್ಬ ಸಾಮಾನ್ಯ ವ್ಯಕ್ತಿಯ ವ್ಯಕ್ತಿತ್ವ ಗುರುತಿಸುವದು ಸುಲಭ ಆದರೆ ಅಸಾಮಾನ್ಯ ವ್ಯಕ್ತಿಯ ವ್ಯಕ್ತಿತ್ವ ಗುರುತಿಸುವದು ಕಷ್ಟ ಆದರೂ ಅವರ ನಡೆನುಡಿ, ಸಾಧನೆ ಸಿದ್ಧಿಗಳಿಂದ ಕವಿಗಳ ಹೊಗಳಿಕೆ ಮೇಲಿಂದ ಅವರ ಅಸಾಧಾರಣ ವ್ಯಕ್ತಿತ್ವ ಗಮನಕ್ಕೆ ಬರುತ್ತಿದೆ.

"ಆಡು ಮುಟ್ಟದ ಗಿಡಗಳಿಲ್ಲ, ಬಸವೇಶ್ವರರು ಚಿಂತಿಸದ ಸಮಸ್ಯೆಗಳಿಲ್ಲ" ಅವರ ಜೀವನವೊಂದು ಅದ್ಭುತ ರಂಗಸ್ಥಳ ಅವರ ವೈಚಾರಿಕ ಕ್ರಾಂತಿಯು ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಹಿತ್ಯ ರಂಗಗಳನ್ನೆಲ್ಲ ಆವರಿಸಿದೆ. ಅವರ ಜೀವನವೇ ಒಂದು ರಂಗಭೂಮಿ, ಶರಣ ಶರಣೆಯರು ಪಾತ್ರಧಾರಿಗಳು ಅನುಭವ ಮಂಟಪ ಸಾಧನಾ ರಂಗವಾಗಿದೆ.

ಬಸವಣ್ಣನವರು ಭಕ್ತಿ ಭಂಡಾರಿಯಾಗಿ, ಸಮಾಜ ಸುಧಾರಕರಾಗಿ, ವಿಚಾರವಾದಿಯಾಗಿ, ಕನ್ನಡದ ಕುಲದೀಪಕಾರಿ ಕ್ರಾಂತಿ ಪುರುಷರಾಗಿ ಬಾಳಿದರು.

ಬಸವಣ್ಣನವರ ಜೀವನ ಯಾವದೇ ಆಡಂಬರವಿಲ್ಲದದು, ಸರಳ ಜೀವನ ಉದಾತ್ತ ವಿಚಾರಗಳಾಗಿದ್ದವು. ಅವರ ತಲೆ ಮುಗಿಲನ್ನು ಮುಟ್ಟುವಂತಿದ್ದರೂ, ಅವರ ದೃಷ್ಟಿ ಸದಾ ಭೂಮಿಯ ಮೇಲಿದ್ದಿತು. ಸಂಸಾರದಲ್ಲಿ ಇದ್ದುಕೊಂಡೆ ವೈರಾಗ್ಯ ಸಾಧಿಸುವ ಪ್ರಯತ್ನ ಅವರದಾಗಿತ್ತು.



ಬಸವಣ್ಣನವರು ಅವತಾರಿ ಪುರುಷರಾಗಿ, ಯುಗ ಪುರುಷರಾಗಿ, ಬಾಳಿದರು. ಅನುಭವ ಮಂಟಪ ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದು ಒಂದು ಅಪೂರ್ವ ಯೋಜನೆಯಾಗಿತ್ತು, ಇದರಿಂದ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ವೀರಶೈವ ಧರ್ಮದ ಕೀರ್ತಿ ಹಬ್ಬಿತು. ದೂರ ದೂರದಿಂದ ಅನೇಕರು ಕಲ್ಯಾಣಕ್ಕೆ ಬಂದು ಹೋದರು. ಕಲ್ಯಾಣ ನಗರವು ಬಸವೇಶ್ವರರ ಕರ್ಮ ಭೂಮಿಯಾಯಿತು. ಕಲ್ಯಾಣ ಕಾರ್ಯಕ್ರಮಗಳ ಸುಕ್ಷೇತ್ರವಾಯಿತು.

ಸುಮಾರು ಒಂದು ಶತಮಾನದ ಅವಧಿಯಲ್ಲಿ ಐದು ಗ್ರಂಥಗಳು ಸಂಪಾದಿಸಲ್ಪಟ್ಟಿವೆ ಎಂಬುದು ಸಂಶೋಧಕರ ಅಭಿಪ್ರಾಯವಾಗಿದೆ. ಈ ಗ್ರಂಥಗಳು ವಚನ ಶಾಸ್ತ್ರದ ಸಾರ, ವೀರಶೈವ ಧರ್ಮದ ಸಾರ, ವೀರಶೈವ ಧರ್ಮದ ಮರ್ಮ ಮುಂತಾದ ಗ್ರಂಥಗಳಾಗಿವೆ. ಇವು 12 ನೆಯ ಶತಮಾನದಲ್ಲಿ ಮೂಡಿ ಬಂದ ವೀರಶೈವ ಶರಣ ಶರಣೆಯರ ಧಾರ್ಮಿಕ ಆರ್ಥಿಕ ಸಾಮಾಜಿಕ ಸಾಂಸ್ಕೃತಿಕ ವಿಚಾರಗಳ ಕ್ರಾಂತಿಯ ನಿದರ್ಶನಗಳು ಬಸವಣ್ಣನವರ ಘನತೆಯ ಕುರುಹುಗಳಾಗಿವೆ.

ವೀರಶೈವ ಧರ್ಮವು ಪ್ರಗತಿಶೀಲ ಧರ್ಮ, ಅದು ಅನುಭಾವ ಧರ್ಮ, ಅನುಭವ ಮಂಟಪವೇ ಅದರ ಕಮ್ಮಟ ಶ್ರೀ ಬಸವೇಶ್ವರರೇ ಅದರ ಸಂಘಟಿಕರು. ಇದನ್ನು ರೂಪಿಸುವಲ್ಲಿ ಬಸವೇಶ್ವರರ ಪಾತ್ರ ಅತ್ಯಂತ ಪ್ರಾಮುಖ್ಯವಾದದು.

ವೀರಶೈವ ಧರ್ಮವು ಅನುಭಾವ ಧರ್ಮವು, ಅದು ಪ್ರಗತಿಶೀಲ ಧರ್ಮವು, ವೀರಶೈವ ಧರ್ಮವು ಅಹಿಂಸಾ ಧರ್ಮವಾಗಿದೆ ದಯವಿಲ್ಲದ ಧರ್ಮ ಆವುದಯ್ಯಾ ದಯವೇ ಬೇಕು ಸಕಲ ಪ್ರಾಣಿಗಳಲ್ಲಿ ದಯವೇ ಧರ್ಮದ ಮೂಲವಯ್ಯಾ ಕೂಡಲ ಸಂಗಮದೇವಾ. ದಯವೇ ಧರ್ಮದ ಆಧಾರ ಎಲ್ಲ ಧರ್ಮಗಳಿಗೆ ಅದೇ ಮೂಲ ತತ್ವ ಎಂಬುದಾಗಿ ಹೇಳಿದ್ದಾರೆ.

"ಸಕಲ ಜೀವರಾಶಿಗಳಿಗೆ ಲೇಸನೇ ಬಯಸುವಾ ನಮ್ಮ ಕೂಡಲ ಸಂಗಮದೇವ" ಇವ ನಾರವ ..... ಇವನಮ್ಮವ ಎಂದಿನಿಸಯ್ಯಾ ಎಂಬ ವಚನಗಳು ಮಾನವತಾವಾದವನ್ನು ಎತ್ತಿ ತೋರಿಸುತ್ತವೆ. ಅಂದರೆ ಬಸವಣ್ಣ ಉನ್ನತಿ ಮಾನವತಾವಾದಿಯಾಗಿದ್ದರು.

ಕಾಯಕವೇ ಕೈಲಾಸ ಕಾಯಕದಿಂದ ಪ್ರಸಾದಕ್ಕೆ ಅರ್ಹತೆ ಎಂಬುದು ಬಸವವಾಣಿ ಯಾವ ಕಾಯಕವನ್ನೇ ಮಾಡಲಿ ಅವರೆಲ್ಲರೂ ಸಮಾನರು ಕಾಯಕದಲ್ಲಿ ಮೇಲು ಕೀಳು ಎಂಬುದಿರುವದಿಲ್ಲ ಇದು ಸಮಾನತೆಯ ತತ್ವಕ್ಕೆ ತಳಹದಿ ಹಾಕಿದರು.

ಬಸವಣ್ಣನವರು ಬಡವರ ಬಗ್ಗೆ ಅನುಕಂಪವುಳ್ಳವರಾಗಿದ್ದರು. ಸಾಲ ಮಾಡಿಯಾದರೂ ತೀರ್ಥಯಾತ್ರೆಗೆ ಹೋಗುವ ಸಂಪ್ರದಾಯ ಖಂಡಿಸಿದರು.

*ಉಳ್ಳವರು ಶಿವಾಲಯ ಮಾಡುವರು*
*ನಾನೇನು ಮಾಡಲಿ ಬಡವನಯ್ಯಾ*
*ಎನ್ನ ದೇಹವೇ ದೇಗುಲವಯ್ಯಾ*
*ಎನ್ನ ಕಾಲೇ ಕಂಬ ಶಿರವೇ ಹೊನ್ನಿನ ಕಳಸವಯ್ಯಾ*

ಕೂಡಲ ಸಂಗಮದೇವಯ್ಯಾ ಕೇಳಯ್ಯಾ ಎಂದು ತಮ್ಮ ವಚನಗಳಲ್ಲಿ ಹೇಳಿದ್ದಾರೆ.

ಕಾಯಕವೇ ಕೈಲಾಸ ಎಂದು ನಿರ್ಣಯಿಸಿದ ಶ್ರೀಬಸವೇಶ್ವರರು ಯಾವ ಪದವಿಯನ್ನು ಬಯಸಲಿಲ್ಲ. ಭಕ್ತಿ ಪಥವೇ ಅವರಿಗೆ ಸತ್ಯ ದರ್ಶನ ನಿಜ ಪಥವೆಂದು ಭಾವಿಸಿದರು.

*ಬ್ರಹ್ಮ ಪದವಿಯನೊಲ್ಲೆ ವಿಷ್ಣು ಪದವಿಯ ನೊಲ್ಲೆ*
*ರುದ್ರ ಪದವಿಯನೊಲ್ಲೆ ! ಮತ್ತಾವ ಪದವಿಯ*
*ನೊಲ್ಲೆನಯ್ಯಾ ಕೂಡಲ ಸಂಗಮ ದೇವಾ*



ತಮ್ಮ ವಚನಗಳ ಮೂಲಕ ಸಾರಿದ್ದಾರೆ ತನುವನ್ನು ಗುರುವಿಗೂ ಮನವನ್ನು ಲಿಂಗಕ್ಕೂ ಧನವನ್ನು ಜಂಗಮಕ್ಕೂ ಅರ್ಪಿಸಿಕೊಂಡ ಬಸವಣ್ಣನವರು ತಮ್ಮತನವನ್ನು ಕೂಡಲ ಸಂಗಮನಲ್ಲಿ ಕರಗಿಸಿಬಿಟ್ಟರು. ತಮ್ಮ ಭಕ್ತಿ ಕಿಂಚಿತ್ತು ಕೊರತೆಯಾಗದಂತೆ ಎಚ್ಚರ ವಹಿಸಿದರು.

ಅಸ್ಪೃಶ್ಯತೆ ಹಿಂದು ಧರ್ಮಕ್ಕೆ ಅಂಟಿಕೊಂಡಿದ್ದ ಕಳಂಕ ಅದನ್ನು ತೊಡೆದು ಹಾಕುವದು ಬಸವಣ್ಣನವರ ಜೀವಿತೋದ್ದೇಶವಾಗಿತ್ತು. ಅವರು ವ್ಯಕ್ತಿಯ ಯೋಗ್ಯತೆಯನ್ನು ನೀತಿಯ ಮಾನದಂಡದಿಂದ ಅಳೆದರು, ಜಾತಿಯಿಂದಲ್ಲ. ಬಹುದೇವೋಪಾಸನೆಯನ್ನು ಅವರು ಖಂಡಿಸಿ ಏಕದೇವೋಪಾಸನೆಯನ್ನು ವಿಧಿಸಿದರು. "ದೇವನೊಬ್ಬ ನಾಮ ಹಲವು" ಎಂಬ ಸೂತ್ರವನ್ನು ತಳಹದಿಯನ್ನಾಗಿಸಿದರು. ದೇವಾಲಯ ನಿರ್ಮಾಣಕ್ಕೆ ಅವಕಾಶ ಕೊಡದೇ ದೇಹವೇ ದೇಗುಲ "ಎನ್ನ ಕಾಲೇ ಕಂಬ ದೇಹವೇ ದೇಗುಲ ಶಿರವೇ ಹೊನ್ನಿನ ಕಳಸವಯ್ಯ" ಎಂದರು.

ಬಸವಣ್ಣನವರು ಸಂಸಾರ ತ್ಯಾಗ ಮಾಡಲಿಲ್ಲ. ಸಂಸಾರದಲ್ಲಿದ್ದು ಕೊಂಡೆ ಪಾರಮಾರ್ಥವನ್ನು ಸಾಧಿಸುವ ಪರಿಯನ್ನು ಕಂಡು ಕೊಂಡರು.

ಅಂತರಂಗ ಬಹಿರಂಗ ಸಾಮರಸ್ಯವನ್ನು ಅವರು ಒತ್ತಿಯಾಗಿ ಹೇಳಿದ್ದಾರೆ. ಒಳ್ಳೆಯ ಆಲೋಚನೆ ಆಲೋಚನೆಗೆ ತಕ್ಕ ನುಡಿ, ನುಡಿಗೆ ತಕ್ಕ ನಡೆ ಅವರದಾಗಿದ್ದವು. ನುಡಿಗೆ ತಕ್ಕ ನಡೆಯ ಕಂಡರೆ ಕೂಡಲ ಸಂಗಮ ತನ್ನೊಳಗಿರ್ಪನಯ್ಯಾ ಎಂಬುದು ಅವರ ಆಶ್ವಾಸನೆ ಯಾಗಿತ್ತು. ಅಂತರಂಗದ ಅರಿವು ಬಹಿರಂಗದ ಕ್ರಿಯೆ ಎರಡಕ್ಕೂ ಅವರಲ್ಲಿ ಸಮಾನ ಪುರಸ್ಕಾರ ನೀಡಿದರು.

ಪ್ರತಿಯೊಬ್ಬರು ಇತರರನ್ನು ತಿದ್ದಲು ಹೊರಡುವದಕ್ಕೆ ಮುನ್ನ ತಮ್ಮನ್ನು ತಾವು ತಿದ್ದಿಕೊಳ್ಳಬೇಕೆಂದು ಬಸವಣ್ಣನವರ ಆಶಯ.

*ಲೋಕದ ಡೊಂಕು ನೀವೇಕೆ ತಿದ್ದುವಿರಿ ?*
*ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ*
*ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ*
*ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ*
*ನಮ್ಮ ಕೂಡಲ ಸಂಗಮ ದೇವ.*

ಸಹಕಾರ ತತ್ವವನ್ನು ಬಸವಣ್ಣನವರು ಕಾಗೆ ಕೋಳಿಗಳ ನಿದರ್ಶನದ ಮೂಲಕ ಸೊಗಸಾಗಿ ತಿಳಿ ಹೇಳುತ್ತಾರೆ.

ಕಾಗೆಯೊಂದುಗಳ ಕಂಡರೆ
ಕರೆಯದೇ ತನ್ನ ಬಳಗವನ್ನು
ಕೋಳಿಯೊಂದು ಕುಟುಕ ಕಂಡರೆ
ಕೂಗಿ ಕರೆಯದೇ ತನ್ನ ಕುಲವೆಲ್ಲವನ್ನು

ಹೀಗೆ ಹಂಚಿಕೊಂಡು ತಿನ್ನುವ ಬುದ್ಧಿ ಮಾನವನಿಗೆ ಕಲ್ಯಾಣ ಸಿದ್ಧಿ. ಬಸವಣ್ಣನವರ ಸತ್ಯ ಅಹಿಂಸೆಗಳ ಅನುಷ್ಠಾನ, ಜಾತ ನಿರ್ಮೂಲನ, ಸಾಮಾಜಿಕ ಸಮತಾ ಸಾಧನೆ, ಅಸ್ಪೃಶ್ಯತಾ ನಿವಾರಣೆ, ದಲಿತೋದ್ಧಾರ, ದಾರಿದ್ರ್ಯ ವಿಮೋಚನೆ, ಮೂಢ ನಂಬಿಕೆಗಳ ವರ್ಜನೆ ಮುಂತಾದವುಗಳ ಕಾರ್ಯ ನಿರ್ವಹಣೆಯಲ್ಲಿ ಇವರ ವ್ಯಕ್ತಿತ್ವ ಮತ್ತು ಪ್ರಭಾವ ಅಘಾಧವಾದುದು.

## 20. ಬಸವೇಶ್ವರರ ಬೋಧನಾಂಶಗಳು :-

1. ಇಷ್ಟ ಲಿಂಗವನ್ನು ಎಡ ಹಸ್ತದಲ್ಲಿ ಇಟ್ಟುಕೊಂಡು ಪೂಜಿಸಬೇಕೆಂದು ತಿಳಿ ಹೇಳಿದರು. ಅದು ಸದಾ ಎದೆಯ ಮೇಲೆ ಧರಿಸಬೇಕೆಂದು ಕಟ್ಟಪ್ಪಣೆ ಮಾಡಿದರು.



2. ಮೂರ್ತಿ ಪೂಜೆ, ಪೂಜಾರಿಗಳ ಹಾವಳಿ ತಪ್ಪಿಸಿದರು. ದೇವ ಮತ್ತು ಭಕ್ತರ ನಡುವೆ ಮಧ್ಯಸ್ಥಿಕೆ ಏಕೆ ಎಂದು ಪ್ರಶ್ನಿಸಿದರು.
3. ಸ್ತ್ರೀಯು ಪೂಜೆಗೆ ಹಾಗೂ ಮೋಕ್ಷಕ್ಕೆ ಅರ್ಹಳು ಎಂದು ತಿಳಿಸಿದರು.
4. ಯಜ್ಞ ಯಾಗಾದಿ ಕಂಡಿಸಿ ಪಶು ಬಲಿ ತಪ್ಪಿಸಿದರು.
5. ಧರ್ಮಕ್ಕೆ ದಯೆಯೇ ಮೂಲ ಎಂದು ಸಾರಿದರು.
6. ದೇವನೊಬ್ಬ ನಾಮ ಹಲವು ಎಂದು ಸಾರಿ ಏಕೋ ದೇವೋಪಾಸನೆ ಪ್ರಚಾರ ಮಾಡಿದರು.
7. ಸತ್ ಚಿತ್ ಆನಂದ ಸ್ವರೂಪನಾದ ಪರಶಿವನನ್ನು ಲಿಂಗಧಾರಣೆ ಮೂಲಕ ಹೊಂದಲು ತಿಳಿಸಿದರು.
8. ಬಾಹ್ಯ ಶುದ್ಧಿಗೆ ಅಂತರಂಗ ಶುದ್ಧಿ ಅಗತ್ಯವೆಂದರು.
9. ನುಡಿದಂತೆ ನಡೆ ಅದೇ ಜನ್ಮ ಕಡೆ ಎಂದು ಬೋಧಿಸಿದರು.
10. ಮೂಢನಂಬಿಕೆ ಹಿಂಸಾಕೃತ್ಯಗಳನ್ನು ತ್ಯಾಜ್ಯ ಮಾಡಿದರು.
11. ಕಾಯಕದ ಮೂಲಕ ತ್ರಿವಿಧ ದಾಸೋಹ ಮಾಡಬೇಕೆಂಬ ತತ್ವವನ್ನು ಪ್ರಯೋಗಿಸಿದರು.
12. ಜಾತಿಬೇಧಗಳ ನಿವಾರಣೆ ಮಾಡಿದರು.
13. ಅಸ್ಪೃಶ್ಯತೆಯ ಕಲಂಕವನ್ನು ತೊಡೆದು ಹಾಕಿದರು.
14. ವೀರಶೈವ ಧರ್ಮವನ್ನು ಮಾನವ ಧರ್ಮವೆಂದು ಸಾರಿದರು.
15. ಪ್ರಾಪಂಚಕರೂ ಐಕ್ಯವನ್ನು ಹೊಂದಬಲ್ಲವರು ಸನ್ಯಾಸ ವ್ರತವು ಅಗತ್ಯವಿಲ್ಲವೆಂದರು.
16. ಶಿವಾನುಭವ ಮಂಟಪ ಸ್ಥಾಪಿಸಿ ಧಾರ್ಮಿಕ ವಿಷಯಗಳನ್ನು ಚರ್ಚಿಸಿ ಆ ನಿರ್ಣಯವನ್ನು ಒಪ್ಪುವ ಕ್ರಮವನ್ನು ತಿಳಿಸಿದರು.

17. ಅಷ್ಠಾವರಣ ಪಂಚಾಚಾರ ಷಟ್‌ಸ್ಥಳಗಳು ವೀರಶೈವ ಧರ್ಮದ ಮುಖ್ಯಾಂಶಗಳು ಇವುಗಳಿಗೆ ಮೂರ್ತಿ ಸ್ವರೂಪ ಕೊಟ್ಟರು.

18. ದೈಹಿಕವಾಗಿ ಮಾನಸಿಕವಾಗಿ ಕಷ್ಟಪಟ್ಟು ದುಡಿಯುವದೇ ಕಾಯಕವೆಂದಿದ್ದಾರೆ.

19. ತನ್ನ ತಾಯಿಯನ್ನು ದೂಷಿಸುವ, ತನ್ನ ತಂದೆಯೊಡನೆ ಹೀನಾಯವಾಗಿ ವರ್ತಿಸುವ, ಇನ್ನೊಬ್ಬನ ಹೆಂಡತಿಯನ್ನು ಪ್ರೀತಿಸುವ ಹಾಗೂ ರಸ್ತೆಗಳ ಮೇಲೆ ಮುಳ್ಳುಗಳನ್ನು ಎಸೆಯುವ ವ್ಯಕ್ತಿಯೇ ಅಸ್ಪೃಶ್ಯ.

20. ದೇವರನ್ನು ಸ್ಮರಿಸುವ ದಿನವೇ ಶುಭ ದಿನವೆಂದರು.

21. ಆವ ಕುಲವಾದರೇನು ? ಶಿವಲಿಂಗವಿದ್ದವನೇ ಕುಲಜನು ಎಂದು ಘೋಷಿಸಿದ್ದಾರೆ.

22. ತಮ್ಮ ದೇಹದ ಮೇಲೆ ಲಿಂಗವನ್ನು ಧರುಸುವವರೇ ಲಿಂಗಾಯಿತರು.



## ಶ್ರೀ ಜಗಜ್ಯೋತಿ ಬಸವೇಶ್ವರ ಜೀವನದ ಪ್ರಮುಖ ಅಂಶಗಳು

1. ಬಸವಣ್ಣನವರ ಹುಟ್ಟೂರು : ಬಾಗೇವಾಡಿ
2. ಬಸವಣ್ಣನ ತಾಯ್ತಂದೆ : ಮಾದರಸ ಮತ್ತು ಮಾದಲಾಂಬಿಕೆ
3. ಬಸವಣ್ಣನವರ ಜನನ : ಕ್ರಿ.ಶ. 1105 ರಲ್ಲಿ



4. ಬಸವಣ್ಣನವರ ಅಕ್ಕ : ನಾಗಕ್ಕ
5. ನಾಗಮ್ಮನ ಗಂಡನ ಹೆಸರು : ಶಿವಸ್ವಾಮಿ
6. ಬಸವಣ್ಣನವರ ಗುರು : ಈಶಾನ್ಯ ಗುರುಗಳು
7. ಬಸವಣ್ಣನವರ ಸೋದರ ಮಾವ : ಬಲದೇವ
8. ಬಸವಣ್ಣನವರ ಪತ್ನಿಯರ ಹೆಸರು : ಗಂಗಾಂಬಿಕೆ ಮತ್ತು ನೀಲಾಂಬಿಕೆ
9. ಬಸವಣ್ಣನವರು ಪ್ರಾರಂಭದಲ್ಲಿ ತೊಡಗಿಸಿಕೊಂಡ ಕಾಯಕ: ಕೋಶಗಾರದ ಗಣಕರಾಗಿ, ರಾಜ್ಯದ ಭಂಡಾರಿಯಾಗಿ, ಮಂತ್ರಿಯಾಗಿ ಕೆಲಸ ನಿರ್ವಹಣೆ.
10. ಬಸವಣ್ಣನವರು ಮಾಡಿದ ಪ್ರಮುಖ ಕಾರ್ಯಗಳು :
    1. ಸ್ತ್ರೀ ಸಮಾನತೆ
    2. ಜಾತ್ಯಾತೀತ ಸಮಾಜ ರಚನೆ
    3. ಸಾಹಿತ್ಯದಲ್ಲಿ ಹೊಸತನ
    4. ಅಂತರ್‌ಜಾತಿಯ ವಿವಾಹ
    5. ಸಾಮಾಜಿಕ ಸಮಾನತೆ ತರುವದು
    6. ಕಾಯಕ ಸಿದ್ಧಾಂತ
    7. ಅಸ್ಪೃಶ್ಯರ ಉದ್ಧಾರ
    8. ವಚನಗಳ ರಚನೆ
    9. ಏಕದೇವೋಪಾಸನೆ ಕುರಿತು ವಿಚಾರಗಳು
11. ಬಸವಣ್ಣನವರ ಅನುಭವ ಮಂಟಪದ ಗುರು : ಅಲ್ಲಮ ಪ್ರಭು.

12. ಅನುಭವ ಮಂಟಪದ ಶರಣರು :1. ಅಲ್ಲಮ ಪ್ರಭು 2. ಚನ್ನ ಬಸವಣ್ಣ 3. ಮೋಳಿಗೆ ಮಾರಯ್ಯ 4. ಹಡಪದ ಅಪ್ಪಣ 5. ಮಡಿವಾಳ ಮಾಚಯ್ಯ 6. ಜೇಡರ ದಾಸಿಮಯ್ಯ 7. ಡೋಹರ ಕಕ್ಕಯ್ಯ 8. ಮಾದರ ಚನ್ನಯ್ಯ 9. ಅಂಬಿಗರ ಚೌಡಯ್ಯ 10. ಆಯ್ದಕ್ಕಿ ಮಾರಯ್ಯ 11. ಸೊನ್ನಲಿಗೆ ಸಿದ್ಧರಾಮ 12. ಶಿವನಾಗಯ್ಯ 13. ನೂಲಿನ ಚಂದಯ್ಯ 14. ಜಗದೇಕ ಮಲ್ಲ 15. ವೈದ್ಯ ಸಂಗಣ್ಣಾ ಮುಂತಾದವರು.

13. ಅನುಭವ ಮಂಟಪದ ಶಿವಶರಣೆಯರು : 1. ಗಂಗಾಂಬಿಕೆ 2. ನೀಲಾಂಬಿಕೆ 3. ಅಕ್ಕಮಹಾದೇವಿ 4. ರೇಚವ್ವ 5. ಗೊಗ್ಗವ್ವ 6. ಮಸಣಮ್ಮ 7. ಸತ್ಯಕ್ಕ 8. ವೀರಮ್ಮಾ 9. ಕಾಳವ್ವ 10. ಗಂಗವ್ವ 11. ಬೊಂತಾದೇವಿ.

14. ಬಸವಣ್ಣನವರ ಮೂಲಕ ಉಂಟಾದ ಕ್ರಾಂತಿಕಾರಕ ವಿಚಾರಗಳು : 1. ಧಾರ್ಮಿಕ ವಿಚಾರಗಳಲ್ಲಿ ಉಂಟಾದ ಕ್ರಾಂತಿ. 2. ಆರ್ಥಿಕ ಕ್ರಾಂತಿ. 3. ಸಾಂಸ್ಕೃತಿಕ ಕ್ರಾಂತಿ. 4. ಸಾಹಿತ್ಯಕ ಕ್ರಾಂತಿ. 5. ಕಲ್ಯಾಣ ಕ್ರಾಂತಿ ಮುಂತಾದವುಗಳು.

15. ಬಸವಣ್ಣನವರು ಲಿಂಗೈಕ್ಯರಾದ ಸ್ಥಳ : ಕೂಡಲ ಸಂಗಮ

16. ಬಸವಣ್ಣ ಲಿಂಗೈಕ್ಯರಾದ ಕಾಲ : ಕ್ರಿ.ಶ. 1167-68

